ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಸದರಿ ಮನವಿಯನ್ನು ಸರ್ಕಾರವು ಮನ್ನಿಸಿ ಈ ಕೆಳಕಂಡಂತೆ ಬದಲಾವಣೆ ಮಾಡಿ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 02 ಎಡಿಇ 2006, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂ: ಆರ್‌ಡಿ 02 ಎಡಿಇ 2006, ದಿನಾಂಕ 13–8–2008ರಲ್ಲಿ ನೇಮಿಸಲಾಗಿದ್ದ ಶ್ರೀ ಎನ್. ಸುಬ್ಬರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಬದಲಿಗೆ ಶ್ರೀ ಟಿ. ಹರಿಯಪ್ಪಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 25, 1ನೇ ಮೈನ್, 2ನೇ ಕ್ರಾಸ್, ಆಂಜನೇಯನಗರ, ಬನಶಂಕರಿ, 3ನೇ ಹಂತ, ಬೆಂಗಳೂರು–85 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಉಳಿದ ಅಂಶಗಳು ದಿನಾಂಕ 13–8–2008ರ ಆದೇಶದಲ್ಲಿರುವಂತೆ ಮುಂದುವರೆಯುತ್ತದೆ.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ವಿಚಾರಣೆಯನ್ನು ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1602

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಕೆ.ಎ.ಎಸ್ ಅಧಿಕಾರಿಗಳಿಗೆ ತಹಶೀಲ್ದಾರರ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂ ಚಾಲಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂ: ಸಿಆಸುಇ 03 ಎಸ್‌ಕೆಜಿ 2000, ದಿನಾಂಕ: 04–03–2006.
2) ಅಧಿಕಾರಿಗಳ ಮನವಿಗಳು.
3) ಸರ್ಕಾರದ ಆದೇಶ ಸಂ: ಕಂಇ 32 ಎಎಸ್‌ಡಿ 2004, ದಿನಾಂಕ: 29–04–2008.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ(2)ರ ಮನವಿಗಳಲ್ಲಿ, ಪ್ರಸಕ್ತ ಕೆ.ಎ.ಎಸ್. ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ/ ನಿವೃತ್ತರಾಗಿರುವ ಈ ಕೆಳಕಂಡ ಅಧಿಕಾರಿಗಳು ಮನವಿಗಳನ್ನು ಸಲ್ಲಿಸಿ ಅವರುಗಳು ತಹಶೀಲ್ದಾರ್ ವೃಂದಕ್ಕೆ ನೇರವಾಗಿ ಆಯ್ಕೆಯಾಗಿ ನಂತರ ಕೆ.ಎ.ಎಸ್ (ಕಿರಿಯ ಶ್ರೇಣಿ) ವೃಂದಕ್ಕೆ ಬಡ್ತಿ ಪಡೆದಿದ್ದಾಗಿ ತಿಳಿಸಿ, ತಾವುಗಳು ತಹಶೀಲ್ದಾರರ ವೃಂದದಲ್ಲಿಯೇ ಸತತವಾಗಿ 15 ವರ್ಷಗಳಿಗೂ ಅಧಿಕ ಸೇವೆ ಸಲ್ಲಿಸಿರುವುದರಿಂದ ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂ ಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದರು.

**ಶ್ರೀಯುತರಾದ**

1) ಜೆ. ಹೆಚ್. ಕಾಂತ
2) ಟಿ.ಸಿ. ಕೃಷ್ಣಸ್ವಾಮಿ
3) ಬಿ.ವಿ. ಕುಲಕರ್ಣಿ
4) ಎಂ.ಎ. ಕಾಲಿದ್
5) ಆರ್. ಕೃಷ್ಣೋಜಿರಾವ್
6) ಪ್ರಭುದೇವ್. ಸಿ.ಹೆಚ್.
7) ಜಯದೇವ್. ಎನ್
8) ಎ.ವಿ. ಪ್ರಸನ್ನ
9) ಎಸ್. ಕೃಷ್ಣ
10) ಎ.ಎನ್. ಪಾಟೀಲ್
11) ಬಿ.ಡಿ.ಅಗಸನಹಳ್ಳಿ
12) ಕೆ.ಡಿ.ಬಿರ್ಜೆ
13) ಬಿ.ಸಿ. ಚಂದ್ರಶೇಖರ್
14) ಎಂ.ಎಸ್. ಚನ್ನಪ್ಪ ಗೌಡರ್
15) ಹೆಚ್. ಚಿತ್ತರಂಜನ್
16) ಎಂ. ಅಬ್ದುಲ್ ಜಬ್ಬಾರ್
17) ಜಿ. ಅನಂತರಾವ್
18) ಹೆಚ್. ಮೂರ್ತಿ
19) ಯು.ಬಿ. ಮುದಗೋಳ್
20) ಎಸ್.ಎಫ್. ಯೋಗಪ್ಪನವರ್

| | |
|---|---|
| 21) ಮದ್. ಗೌಸ್ | 21) ಎಸ್. ಮೂರ್ತಿ |
| 23) ಕೆ.ವಿ. ನಂಜುಂಡೇಗೌಡ | 24) ವಿ.ಎ. ಮಚಕನೂರ್ |
| 25) ಕೆ. ಇಕ್ಬಾಲ್ ಹುಸೇನ್ | 26) ಸಿ.ಎಂ. ಮರಡಿ |
| 27) ಎಂ. ನಿಯಾಜುದ್ದೀನ್ ಖಾನ್ | 28) ಬಿ. ಮೃತ್ಯುಂಜಯಪ್ಪ |
| 29) ಕೆ. ತಿಮ್ಮಯ್ಯ | 30) ನರಸಯ್ಯ |
| 31) ಎನ್.ಜಿ. ನಂಜರಾಜ್ | 32) ತೇಜಸ್ವಿನಿ. ಎಸ್. ನಾಯಕ್ |
| 33) ನಾಗಾನಾಥ ಮಳಿಗೆ | 34) ಎಸ್.ವಿ. ಸೋಮಣ್ಣನವರ್ |
| 35) ಹೆಚ್.ಪಿ. ಶೆಲ್ಲಿಕೇರಿ | 36) ಶೇಕ್ ಅಹಮದ್ |
| 37) ಕೆ.ಸಿ. ಶಿವಶಂಕರ್ | 38) ವಿ.ಎಲ್. ಶಂಕರ್ |
| 39) ಶಿವಬಸವಯ್ಯ | 40) ಆರ್. ರಾಮೇಶಪ್ಪ |
| 41) ಎಂ.ಆರ್. ರಾಮಣ್ಣ | 42) ಎಂ. ದೊಡ್ಡಪ್ಪ |
| 43) ರಾಯ್ಕರ್. ಕೆ.ಎಸ್ | 44) ಎನ್. ರಾಮಕೃಷ್ಣ |
| 45) ರೇವಣಪ್ಪ | 46) ಪಿ.ವಿ. ಮೋಹನ್ |

ಮೇಲೆ ಓದಲಾದ ಕ್ರ.ಸಂ.(3), ದಿನಾಂಕ: 29-04-2008ರನ್ವಯ ಸರ್ಕಾರವು ದಿನಾಂಕ: 17-11-2007ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯ ಶಿಫಾರಸ್ಸಿನಂತೆ ಒಟ್ಟು 46 ಕೆಎಎಸ್ ಅಧಿಕಾರಿಗಳ ಪೈಕಿ 17 ಕೆಎಸ್ ಅಧಿಕಾರಿಗಳಿಗೆ ತಹಶೀಲ್ದಾರ್ ವೃಂದದಲ್ಲಿ 10 ವರ್ಷಗಳ ಕಾಲಮಿತಿ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಲಾಗಿದೆ. ಹಾಗೂ ಈ ಪಟ್ಟಿಯಲ್ಲಿ ಶ್ರೀ ಎಂ.ಎಸ್.ಚನ್ನಪ್ಪಗೌಡರ್ ಇವರಿಗೆ ಈಗಾಗಲೇ ಸರ್ಕಾರವು 10 ವರ್ಷಗಳ ಕಾಲಮಿತಿ ವೇತನ ಹಾಗೂ ಸ್ವಯಂಚಾಲಿತ ಬಡ್ತಿಯನ್ನು ಮಂಜೂರು ಮಾಡಿರುವುದರಿಂದ ಇನ್ನೂ ಉಳಿದ 45 ಕೆಎಎಸ್ ಅಧಿಕಾರಿಗಳ ಪೈಕಿ ಅನೇಕ ಕೆಎಎಸ್ ಅಧಿಕಾರಿಗಳು ಈ ಪ್ರಸ್ತಾವನೆಯ ಕುರಿತಂತೆ ಪುನರ್ ಪರಿಶೀಲಿಸಲು ಮನವಿ ಸಲ್ಲಿಸಿದ್ದರ ಮೇರೆಗೆ ಸರ್ಕಾರವು ಪ್ರಸ್ತಾವನೆಯನ್ನು ಅಧಿಕೃತ ಜ್ಞಾಪನ ಸಂ: ಎಫ್‌ಡಿ 01 ಎಸ್‌ಆರ್‌ಸಿ 85, ದಿನಾಂಕ: 22-01-85, ಕರ್ನಾಟಕ ನಾಗರೀಕ ಸೇವಾ (ಕಾಲಮಿತಿ ವೇತನ ಬಡ್ತಿ) ನಿಯಮಗಳ 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಮಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಪರಿಶೀಲಿಸಿ ಅರ್ಹ ಅಧಿಕಾರಿಗಳಿಗೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 242 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಕೆಳಕಂಡ ಕೆಎಎಸ್ ಅಧಿಕಾರಿಗಳಿಗೆ ತಹಶೀಲ್ದಾರ್ ವೃಂದದಲ್ಲಿ ಅವರುಗಳ ಹೆಸರಿನ ಮುಂದೆ ತಿಳಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 10 ವರ್ಷಗಳ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷಗಳ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವಾ(ಕಾಲಮಿತಿ, ವೇತನ, ಬಡ್ತಿ) ನಿಯಮಗಳು 1983 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು1991ರ ಪ್ರಕಾರ ಮಂಜೂರು ಮಾಡಲಾಗಿದೆ.

| ಕ್ರ. ಸಂ | ಅಧಿಕಾರಿಯ ಹೆಸರು- ಶ್ರೀ/ಶ್ರೀಮತಿ | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 1 | 2 | 3 | 4 |
| 1 | ಜೆ.ಹೆಚ್.ಕಾಂತ | 01-08-86 | 31-07-91 |
| 2 | ಟಿ.ಸಿ.ಕೃಷ್ಣಸ್ವಾಮಿ | 21-07-86 | 20-07-91 |
| 3 | ಬಿ.ವಿ.ಕುಲಕರ್ಣಿ | 22-07-86 | 21-07-91 |
| 4 | ಎಂ.ಎ.ಖಾಲಿದ್ | 21-07-86 | 20-07-91 |

| 1 | 2 | 3 | 4 |
|---|---|---|---|
| 5 | ಬಿ.ಡಿ. ಅಗಸನಹಳ್ಳಿ | 18–07–86 | 17–07–91 |
| 6 | ಕೆ.ಡಿ.ಬಿರ್ಜಿ | 21–07–86 | 20–07–91 |
| 7 | ಬಿ.ಸಿ.ಚಂದ್ರಶೇಖರ್ | 22–07–86 | 21–07–91 |
| 8 | ಹೆಚ್.ಚಿತ್ತರಂಜನ್ | 12–07–86 | 11–07–91 |
| 9 | ಹೆಚ್. ಮೂರ್ತಿ | 15–07–86 | 14–07–91 |
| 10 | ಯು.ಬಿ.ಮುದಗೋಳ | 27–07–86 | 26–07–91 |
| 11 | ಎಸ್.ಎಫ್.ಯೋಗಪ್ಪನವರ್ | 25–08–84 | 01–06–91 |
| 12 | ಮಹ್ಮದ್‌ಗೌಸ್ | –––– | 01–08–91 |
| 13 | ಎಸ್. ಮೂರ್ತಿ | 14–07–86 | 13–07–91 |
| 14 | ಕೆ.ವಿ.ನಂಜುಂಡೇಗೌಡ | 18–07–86 | 17–07–91 |
| 15 | ವಿ.ಎ.ಮಾಚಕನೂರ | 22–07–86 | 21–07–91 |
| 16 | ಕೆ. ಇಕ್ಬಾಲ್ ಹುಸೇನ್ | ––– | 09–04–92 |
| 17 | ಸಿ.ಎಂ.ಮರಡಿ | 06–08–86 | 05–08–91 |
| 18 | ಎಂ. ನಿಯಾಜುದ್ದೀನ್‌ಖಾನ್ | ––– | 05–04–82 |
| 19 | ಬಿ. ಮೃತ್ಯುಂಜಯಪ್ಪ | 26–08–84 | 01–06–91 |
| 20 | ಕೆ. ತಮ್ಮಯ್ಯ | ––– | 04–08–91 |
| 21 | ನರಸಯ್ಯ | 31–07–86 | 30–07–91 |
| 22 | ಎನ್.ಜಿ.ನಂಜರಾಜ್ | ––– | 30–07–91 |
| 23 | ನಾಗನಾಥ ಮಲ್ಲಿಗೆ | 20–07–86 | 19–07–91 |
| 24 | ಎಸ್.ವಿ.ಸೋಮಣ್ಣವರ್ | 16–07–86 | 15–07–91 |
| 25 | ಹೆಚ್.ಪಿ.ಶೆಳ್ಳಿಕೇರಿ | 20–07–86 | 19–07–91 |
| 26 | ಶೇಖ್ ಅಹ್ಮದ್ | 16–07–86 | 15–07–91 |
| 27 | ಕೆ.ಸಿ.ಶಿವಶಂಕರ್ | ––– | 05–04–92 |
| 28 | ವಿ.ಎಲ್.ಶಂಕರ್ | 29–07–86 | 28–07–91 |
| 29 | ಆರ್. ರಮೇಶಪ್ಪ | 18–07–86 | 17–07–91 |
| 30 | ಎಂ.ಆರ್.ರಾಮಣ್ಣ | ––– | 12–04–92 |
| 31 | ಎಂ. ದೊಡ್ಡಪ್ಪ | 15–07–86 | 14–07–91 |
| 32 | ರಾಯ್ಕರ್ ಕೆ.ಎಸ್ | ––– | 10–04–92 |
| 33 | ರೇವಣಪ್ಪ | 10–08–86 | 09–08–91 |
| 34 | ಪಿ.ವಿ.ಮೋಹನ್ | 20–07–86 | 19–07–91 |

ಈ ಮೇಲಿನ ಅಧಿಕಾರಿಗಳು ಈ ಹಿಂದೆ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್ (ಕಿರಿಯ ಶ್ರೇಣಿ)

ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹ ದಿನಾಂಕದವರೆಗೆ ಕೆಎಎಸ್ (ಕಿ.ಶ್ರೇಣಿ) ವೃಂದದಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 805 ಎಕ್ಸ್‌ಪಿ–7/08, ದಿನಾಂಕ: 30–07–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1475

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 1998ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಕಂಇ 08 ಎಟಿಎಸ್ 2006, ದಿನಾಂಕ: 15–04–2006.

2) ಸರ್ಕಾರದ ಅಧಿಕೃತ ಜ್ಞಾಪನ ಸಂ: ಕಂಇ 08 ಎಟಿಎಸ್ 2006, ದಿನಾಂಕ: 21–04–2006.

3) ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ದಿನಾಂಕ:21–08–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ದಿನಾಂಕ: 15–04–2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 50 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 50 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ 50 ಪೈಕಿ 49 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 21–04–2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಮೇಲೆ ಓದಲಾದ ಕ್ರ.ಸಂ(3), ದಿನಾಂಕ: 21–08–2008ರಲ್ಲಿ ಒಟ್ಟು 17 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ, ಆದೇಶಿಸಲಾಗಿತ್ತು. ಮುಂದುವರೆದು, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸಿರುತ್ತಾರೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ, ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಒಟ್ಟು 14 ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 166 ಎಎಸ್‌ಡಿ 2008, ಬೆಂಗಳೂರು,ದಿನಾಂಕ: 16ನೇ ಅಕ್ಟೋಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 14 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ, ಆದೇಶ ಹೊರಡಿಸಲಾಗುವುದು.

| ಕ್ರ.ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ/ ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಮಂಜುನಾಥ್. ಪಿ.ಎಸ್ | 28–04–2006 | 27–04–2008 |
| 2 | ವರಪ್ರಸಾದ್‌ರೆಡ್ಡಿ | 17–04–2006 | 16–04–2008 |
| 3 | ಮಹೇಶ್‌ಬಾಬು.ಎನ್ | 17–04–2006 | 16–04–2008 |
| 4 | ಡಾ: ದಾಸೇಗೌಡ.ಎಂ | 28–04–2006 | 27–04–2008 |
| 5 | ದೇವರಾಜು.ಎ | 24–04–2006 | 23–04–2008 |
| 6 | ಮಂಜುನಾಥಸ್ವಾಮಿ.ಬಿ.ಎಸ್ | 22–04–2006 | 21–04–2008 |
| 7 | ರೇಷ್ಮ ತಹಸೀನ್ | 17–04–2006 | 16–04–2008 |
| 8 | ಖಾಜಿ ನಫೀಜಾ | 19–04–2006 | 18–04–2008 |
| 9 | ಧನಲಕ್ಷ್ಮಿ | 17–04–2006 | 16–04–2008 |
| 10 | ರಶ್ಮಿ.ಜಿ | 17–04–2006 | 16–04–2008 |
| 11 | ವೆಂಕಟೇಶ್‌ಮೂರ್ತಿ.ವಿ | 28–04–2006 | 27–04–2008 |
| 12 | ರಂಗನಾಥ್ | 20–04–2006 | 19–04–2008 |
| 13 | ನರಸಿಂಹಪ್ಪ | 17–04–2006 | 16–04–2008 |
| 14 | ಶಾಂತಲಾ.ಕೆ.ಟಿ | 17–0–2006 | 16–04–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಅರ್. 1476

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ– ದೋಷಮುಕ್ತಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2007 (ಭಾಗ), ದಿನಾಂಕ: 11–03–2008.
2) ಶ್ರೀ ಕೆ. ಸತ್ಯಮೂರ್ತಿಹೊಳ್ಳ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ಇವರ ವಿಚಾರಣಾ ವರದಿ ದಿನಾಂಕ: 21–08–2008.

**ಪ್ರಸ್ತಾವನೆ:**

ಶ್ರೀ ಸಿ.ಎಂ. ಹಿರೇಮಠ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ (ಪ್ರಸ್ತುತ ನಿವೃತ್ತರು) ಇವರು ಮಾನ್ಯ ಮುಖ್ಯಮಂತ್ರಿಗಳ ಗ್ರಾಮ ವಾಸ್ತವ್ಯದ ಬಗ್ಗೆ ಅವಹೇಳನಕಾರಿಯಾಗಿ ಸಾರ್ವಜನಿಕರ ಎದುರಿಗೆ ಮಾತನಾಡಿ ಸರ್ಕಾರಿ ಅಧಿಕಾರಿ/ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿದ್ದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ: 1ರಲ್ಲಿ ಓದಲಾದ ದಿನಾಂಕ: 11–03–2008ರ ಸರ್ಕಾರಿ ಆದೇಶದಲ್ಲಿ ಶ್ರೀ ಸತ್ಯಮೂರ್ತಿಹೊಳ್ಳ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣಾಧಿಕಾರಿ ಮುಂದೆ ಮಂಡಿಸಲು ಗದಗ್ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಜರುಗಿಸಿ, ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ: 21–08–2008ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಲ್ಲಿ ಸದರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಶ್ರೀ ಸಿ.ಎಂ. ಹಿರೇಮಠ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2007 (ಭಾಗ), ಬೆಂಗಳೂರು, ದಿನಾಂಕ: 06ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಶ್ರೀ ಸಿ.ಎಂ. ಹಿರೇಮಠ್, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ದಿನಾಂಕ: 11–03–2008ರ ಆದೇಶದಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಸದರಿ ಅಧಿಕಾರಿಯವರ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 05–03–2007 ರಿಂದ 10–01–2008ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 100 (1) (ಬಿ)ರ ಪ್ರಕಾರ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1423

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ತುಮಕೂರು ಜಿಲ್ಲಾಧಿಕಾರಿಗಳ ಪತ್ರ ಸಂ: ಸಿಬ್ಬಂದಿ (1) ಸಿಸಿಎ:ವಿವ:5/ 2004–05, ದಿನಾಂಕ: 30–11–2004.
2) ಶ್ರೀಮತಿ ಭಾಗ್ಯವತಮ್ಮ ತಹಶೀಲ್ದಾರ್ ಮತ್ತು ಇತರ ನೌಕರರಿಗೆ ನೀಡಿರುವ ತಿಳುವಳಿಕೆ ಪತ್ರ ಸಂ: ಕಂ.ಇ:51:ಎಡಿಇ:04, ದಿನಾಂಕ: 2–3–2005.
3) ಸರ್ಕಾರದ ಆದೇಶ ಸಂ: ಕಂಇ 51 ಎಡಿಇ 2004, ದಿನಾಂಕ: 02–1–2006.
4) ಶ್ರೀ ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ಮನವಿ ದಿನಾಂಕ: 09–01–2006.

**ಪ್ರಸ್ತಾವನೆ:**

ಶ್ರೀಮತಿ ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಮತ್ತಿತರ 4 ಮಂದಿ ಸಿಬ್ಬಂದಿಯವರು ಶ್ರೀ ಲೋಕೇಶ್ ಬಿನ್ ಕೆ.ಬಿ. ಬಸವರಾಜು ಇವರಿಗೆ ನಿಯಮ ಉಲ್ಲಂಘಿಸಿ ಅಕ್ರಮವಾಗಿ ಬಿಸಿಎಂ (ಬಿ) ದೃಢೀಕರಣ ಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದರಿಂದ ಸದರಿಯವರುಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕರಡು ದೋಷಾರೋಪಣೆಗಳನ್ನು ತಯಾರಿಸಿ ಮೇಲೆ ಕ.ಸಂ (1)ರಲ್ಲಿ ಓದಲಾದ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ 1 ರಿಂದ 4 ರವರೆಗೆ) ಆರೋಪಿತ ಅಧಿಕಾರಿ/ ನೌಕರರಿಗೆ ಜಾರಿ ಮಾಡಿ ಆರೋಪಗಳ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ (2)ರಲ್ಲಿ ಓದಲಾದ ದಿ: 2–3–05ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಗಿತ್ತು.

ಆಪಾದಿತ ಅಧಿಕಾರಿ /ನೌಕರರಲ್ಲಿ ಶ್ರೀಮತಿ ಭಾಗ್ಯವತಮ್ಮ ಶ್ರೀ ವಾಸುದೇವರಾಜು, ಶ್ರೀ ಬಿ.ಎಂ. ಗಂಗರಾಜು ಮತ್ತು ಶ್ರೀ ಕೆಂಪರಾಮಯ್ಯರವರುಗಳು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಉಳಿದ ನೌಕರರಾದ ಶ್ರೀ ತಿಮ್ಮಯ್ಯ ಇವರ ಭಾಗಶ: ಉತ್ತರ ನೀಡಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾದೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ತುಮಕೂರು ಜಿಲ್ಲಾಧಿಕಾರಿಗಳ ಕಛೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರ.ಸಂ.(3), ದಿನಾಂಕ: 02–01–2006ರಲ್ಲಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(4) ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ವಿಚಾರಣಾಧಿಕಾರಿಗಳು ತಮಗೆ ತೆರೆದ ಹೃದಯ ಚಿಕಿತ್ಸೆ ಆಗಿರುವುದರಿಂದ, ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ. ಸದರಿ ವಿಚಾರಣಾಧಿಕಾರಿಗಳ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಲಕ್ಷ್ಮೀನರಸಹಿಂಹಯ್ಯ ಇವರ ಬದಲಿಗೆ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿರುವುದರಿಂದ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 51 ಎಡಿಇ 2004, ಬೆಂಗಳೂರು, ದಿನಾಂಕ: 09ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀಮತಿ ಕೆ.ಹೆಚ್.ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ಮತ್ತು ಇವರ ಸಿಬ್ಬಂದಿಯವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯೋಜಿಸಲಾಗಿದ್ದ ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಬದಲಿಗೆ ಶ್ರೀ ಬಿ.ಎಲ್.ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:239:1, 4ನೇ ಮುಖ್ಯರಸ್ತೆ, ನಾಗಶ್ರೀ, ಚಾಮರಾಜಪೇಟೆ, ಬೆಂಗಳೂರು–560 018 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಈ ಇಲಾಖೆ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಕಛೇರಿ ಆವರಣದಲ್ಲಿ ನಡೆಸಲು ಮಂಡನಾಧಿಕಾರಿಗಳಾದ ಕೇಂದ್ರಸ್ಥಾನಿಕ ಸಹಾಯಕರು, ತುಮಕೂರು ಜಿಲ್ಲೆ ಇವರು ಕ್ರಮ ಕೈಗೊಳ್ಳುವುದು.

ಸರ್ಕಾರದ ಆದೇಶ ಸಂ: ಕಂಇ 51 ಎಡಿಇ 2004, ದಿನಾಂಕ: 02–01–2006ರ ಆದೇಶದಲ್ಲಿನ ಉಳಿದ ಅಂಶಗಳು (ವಿಚಾರಣಾಧಿಕಾರಿಗಳ ಸಂಭಾವನೆಯನ್ನು ಹೊರತುಪಡಿಸಿ) ಮುಂದುವರೆಯುತ್ತವೆ. ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣೆಯನ್ನು ಆದಷ್ಟು ಶೀಘ್ರವಾಗಿ ಮುಕ್ತಾಯಗೊಳಿಸಿ, ಸರ್ಕಾರಕ್ಕೆ 2 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1283

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ದಿನಾಂಕ 17–11–2008ರಂದು ಮಾನ್ಯ ಕಂದಾಯ ಸಚಿವರು ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಕಂಡುಬಂದ ನ್ಯೂನ್ಯತೆಗಳ ಬಗ್ಗೆ.

**ಓದಲಾಗಿದೆ:** ಮಾನ್ಯ ಕಂದಾಯ ಸಚಿವರ ವರದಿ ದಿನಾಂಕ 17–11–2008.

**ಪ್ರಸ್ತಾವನೆ :**

ದಿನಾಂಕ 17–11–2008ರಂದು ಮಾನ್ಯ ಕಂದಾಯ ಸಚಿವರು ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ತಹಶೀಲ್ದಾರ್ ಕಛೇರಿಯನ್ನು ತಪಾಸಣೆ ನಡೆಸಿದ್ದು, ತಪಾಸಣೆ ಸಮಯದಲ್ಲಿ ಕೆಲವು ನ್ಯೂನ್ಯತೆಗಳು ಕಂಡುಬಂದಿರುವುದಾಗಿ ವರದಿ ಮಾಡಿರುತ್ತಾರೆ.

ಪಿಂಚಣಿ ಸೌಲಭ್ಯಗಳಾದ ವೃದ್ಧಾಪ್ಯ ವೇತನ, ಅಂಗವಿಕಲರ ವೇತನ, ವಿಧವಾ ವೇತನ, ಸಾಮಾಜಿಕ ಭದ್ರತಾ ಯೋಜನೆ, ಸಂಧ್ಯಾ ಸುರಕ್ಷಾ ಯೋಜನೆಗಳ ಬಗ್ಗೆ ಪರಿಶೀಲಿಸಿದಾಗ ಈ ಕೆಳಕಂಡ ನ್ಯೂನತೆಗಳು ಕಂಡು ಬಂದಿರುತ್ತವೆ.

1) ಹಾಜರಾತಿ ಪುಸ್ತಕವನ್ನು ಪರಿಶೀಲಿಸಿದಾಗ ಆಡಳಿತ ಶಾಖೆಯ ಶಿರಸ್ತೇದಾರರು ಸಮಯ 2.45 ಆದರೂ ಕಛೇರಿಯ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. 3.15 ಗಂಟೆಗೆ ಹಾಜರಾಗಿರುತ್ತಾರೆ. ವಿಳಂಬ ಕುರಿತಂತೆ ತಹಶೀಲ್ದಾರರನ್ನು ವಿಚಾರಿಸಲಾಗಿ ಮೌನವಹಿಸಿದ್ದು, ಸಿಬ್ಬಂದಿಯನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳದೇ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

2) ಅಂಗವಿಕಲರ ವೇತನಕ್ಕೆ ಸಂಬಂಧಿಸಿದಂತೆ ಒಟ್ಟು 523 ಪ್ರಕರಣಗಳು ದಿನಾಂಕ 31–10–2008ಕ್ಕೆ ಬಾಕಿ ಇದ್ದು, ಎಲ್ಲಾ ಪ್ರಕರಣಗಳು 3 ತಿಂಗಳು ಒಳಗೆ ಬಾಕಿ ಇರುವುದಾಗಿ ಮಾಸಿಕ ಬಾಕಿ ಪಟ್ಟಿಯಲ್ಲಿ ನಮೂದಿಸಿದ್ದು, ವಾಸ್ತವವಾಗಿ ಪರಿಶೀಲಿಸಿದಾಗ ಕಳೆದ ಒಂದು ವರ್ಷ ಅವಧಿ ಮೇಲ್ಪಟು ಬಾಕಿ ಇರುತ್ತವೆ. ಉದಾ: ಸಂಖ್ಯೆ: 120306/130/07–08, 121571/140/07–08 ತಹಶೀಲ್ದಾರರು ಮೇಲ್ವಿಚಾರಣೆ ನಡೆಸದೇ ಇರುವುದು ವಿಷಯ ವಹಿಯಿಂದ ಸಾಬೀತಾಗಿರುತ್ತದೆ.

3) ಸಂಧ್ಯಾ ಸುರಕ್ಷಾ ಯೋಜನೆ ಅಡಿಯಲ್ಲಿ ಒಟ್ಟು 3394 ಅರ್ಜಿಗಳು ದಿನಾಂಕ 31–10–2008ಕ್ಕೆ ಬಾಕಿ ಇದ್ದು, ಎಲ್ಲಾ ಪ್ರಕರಣಗಳು 3 ತಿಂಗಳು ಒಳಗೆ ಬಾಕಿ ಇರುವುದಾಗಿ ಮಾಸಿಕ ಬಾಕಿ ಪಟ್ಟಿಯಲ್ಲಿ ನಮೂದಿಸಿದ್ದು, ವಾಸ್ತವವಾಗಿ ಪರಿಶೀಲಿಸಿದಾಗ ಕಳೆದ ಒಂದು ವರ್ಷ ಮೇಲ್ಪಟ್ಟು ಅರ್ಜಿಗಳು ವಿಲೇವಾರಿ ಆಗದೇ ಇರುವುದು ಕಂಡು ಬಂದಿರುತ್ತದೆ. ಪರಿಶೀಲನಾ ವರದಿಗಾಗಿ ಗ್ರಾಮ ಲೆಕ್ಕಿಗರಿಗೆ ಮತ್ತು ಕಂದಾಯ ಪರಿವೀಕ್ಷಕರಿಗೆ ಕಳುಹಿಸಿದ್ದು, ತಹಶೀಲ್ದಾರರು ಮೇಲ್ವಿಚಾರಣೆ ನಡೆಸದೇ ಇರುವುದು ವಿಷಯ ವಹಿಯಿಂದ ಸಾಬೀತಾಗಿರುತ್ತದೆ.

4) ರಾಷ್ಟ್ರೀಯ ಕೌಟುಂಬಿಕ ಭದ್ರತಾ ಯೋಜನೆ ಅಡಿಯಲ್ಲಿಯೂ ಸಹ ಮೇಲೆ ವಿವರಿಸಿದಂತೆ 400ಕ್ಕೂ ಹೆಚ್ಚು ಪ್ರಕರಣಗಳು ಬಾಕಿ ಇದ್ದು ವಿಚಾರಣೆಗಾಗಿ ಗ್ರಾಮ ಲೆಕ್ಕಿಗರಿಗೆ ಮತ್ತು ಕಂದಾಯ ಪರಿವೀಕ್ಷಕರಿಗೆ ಕಳುಹಿಸಿದ್ದು, ಕಳೆದ ಏಳು ತಿಂಗಳುಗಳಿಂದ ಮೇಲ್ವಿಚಾರಣೆ ನಡೆಸದೇ ಇರುವುದರಿಂದ ವಿಲೇಗೊಳಿಸಲು ಯಾವ ಕ್ರಮವನ್ನು ತಹಶೀಲ್ದಾರರು ಕೈಗೊಳ್ಳದೇ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

5) ವಿಧವಾ ವೇತನ ಯೋಜನೆ ಅಡಿಯಲ್ಲಿ 433 ಪ್ರಕರಣಗಳು ಬಾಕಿ ಇದ್ದರೂ ಎಲ್ಲಾ ಪ್ರಕರಣಗಳು 3 ತಿಂಗಳು ಒಳಗೆ ಬಾಕಿ ಇರುವುದಾಗಿ ಮಾಸಿಕ ಬಾಕಿ ಪಟ್ಟಿಯಲ್ಲಿ ತೋರಿಸಿರುತ್ತಾರೆ. ವಾಸ್ತವವಾಗಿ ಪರಿಶೀಲಿಸಿದಾಗ ಕಳೆದ ಒಂದು ವರ್ಷ ಮೇಲ್ಪಟ್ಟು ಪ್ರಕರಣಗಳನ್ನು ವಿಚಾರಣೆಗಾಗಿ ಗ್ರಾಮ ಲೆಕ್ಕಿಗರಿಗೆ ಮತ್ತು ಕಂದಾಯ ಪರಿವೀಕ್ಷಕರಿಗೆ ಕಳುಹಿಸಿದ್ದು, ಇದುವರೆವಿಗೂ ವಿಚಾರಣೆ ವರದಿ ಬಾರದೇ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಉದಾ: 154160/1658/19–10–2007, 1852/15–11–2007, 157962/1965/26–11–2007, 158484/2019/5–12–2007, 158439/2024/5–12–2007.

6) ಶ್ರೀಮತಿ ಹಾಲಮ್ಮ ಸಂಗಪ್ಪ 68 ವರ್ಷ ಮೇಲ್ಪಟ್ಟ ವಯೋ ವೃದ್ಧೆ ತಾನು ವಿಧವಾ ವೇತನ ಪಿಂಚಣಿಗಾಗಿ ದಿನಾಂಕ 16–10–2007ರಂದು ಅರ್ಜಿ ಸಲ್ಲಿಸಿದ್ದು ಸ್ವೀಕೃತಿ ಪಡೆದಿದ್ದರೂ ಇದುವರೆವಿಗೂ ಯಾವುದೇ ಕ್ರಮ ಕೈಗೊಂಡಿರುವುದಿಲ್ಲವೆಂದು ತಿಳಿಸಿದಾಗ, ಈ ಬಗ್ಗೆ ಪರಿಶೀಲಿಸಿದಾಗ ಸಂಬಂಧಪಟ್ಟ ಗ್ರಾಮ ಲೆಕ್ಕಾಧಿಕಾರಿ ನವೆಂಬರ್ 2008ರಲ್ಲಿ ವರದಿ ತಾಲ್ಲೂಕು ಕಛೇರಿಗೆ ಸಲ್ಲಿಸಿದ್ದು ದಿನಾಂಕ ನಮೂದಿಸಿರುವುದಿಲ್ಲ. ಅದೇ ರೀತಿ ತಾಲ್ಲೂಕು ಕಛೇರಿಯ ವಿಷಯ ನಿರ್ವಾಹಕರು ದಿನಾಂಕ ನಮೂದಿಸಿರುವುದಿಲ್ಲ. ದಿನಾಂಕ 13–11–2008ರಂದು ತಹಶೀಲ್ದಾರರು ಸ್ಪಷ್ಟವಾಗಿ ಆದೇಶ ನೀಡದೇ ಬಾಕಿ ಇಟ್ಟಿರುವುದು ಸಾಬೀತಾಗಿರುತ್ತದೆ. ಈ ಪ್ರಕರಣವು ಅರ್ಹ ಇದ್ದರೂ ಕಳೆದ 13 ತಿಂಗಳುಗಳಿಂದ ಬಾಕಿ ಇಟ್ಟಿರುವುದು ಸಾಬೀತಾಗಿದ್ದು, ಕರ್ತವ್ಯಲೋಪವೆಸಗಿದ ಗ್ರಾಮ ಲೆಕ್ಕಾಧಿಕಾರಿ, ಕಂದಾಯ ಪರಿವೀಕ್ಷಕ, ತಾಲ್ಲೂಕು ಕಛೇರಿಯ ವಿಷಯ ನಿರ್ವಾಹಕ ಸಂಬಂಧಪಟ್ಟ ಶಿರಸ್ತೇದಾರರು ಮತ್ತು ತಹಶೀಲ್ದಾರರ ವೇತನದಿಂದ ಕಟಾಯಿಸಿ ಪರಿಹಾರವನ್ನು ಸದರಿ ಅರ್ಜಿದಾರರಿಗೆ ಪಾವತಿಸಲು ಕ್ರಮ ಜರುಗಿಸುವುದು ಸೂಕ್ತ.

7) ಅದೇ ರೀತಿ ವೃದ್ಧಾಪ್ಯ ವೇತನ ಪ್ರಕರಣಗಳು ಒಟ್ಟು 334 ಬಾಕಿ ಇದ್ದು ಇವುಗಳು ಸಹಿತ ಕಳೆದ ಒಂದು ವರ್ಷ ಮೇಲ್ಪಟು ಬಾಕಿ ಇದ್ದು ವಿಚಾರಣೆಗಾಗಿ ಗ್ರಾಮ ಲೆಕ್ಕಿಗರಿಗೆ/ಕಂದಾಯ ಪರಿವೀಕ್ಷಕರಿಗೆ ಕಳುಹಿಸಿದ್ದು ಕೆಲವು ಪ್ರಕರಣಗಳಲ್ಲಿ ಇಂದಿಗೂ ವರದಿ ಬಾರದೇ ಇರುವುದು ಮೇಲ್ನೋಟಕ್ಕೆ ವಿಷಯ ವಹಿಯಿಂದ ಸಾಬೀತಾಗಿರುತ್ತದೆ.
8) ಮಾಸಿಕ ಬಾಕಿ ಪಟ್ಟಿಯಲ್ಲಿ ಕಡತಗಳ ವಿಲೇವಾರಿ ಕುರಿತಂತೆ ಪ್ರಗತಿ ವರದಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವಾಗ ಅವಧಿವಾರು ಬಾಕಿ ಇರುವ ಬಗ್ಗೆ ತಹಶೀಲ್ದಾರರು ಆರು ತಿಂಗಳು ಮತ್ತು ಒಂದು ವರ್ಷ ಮೇಲ್ಪಟ್ಟು ಕಡತಗಳು ಬಾಕಿ ಇದ್ದರೂ ನಮೂದಿಸದೇ ಇರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.
9) ಪಹಣಿ ತಿದ್ದುಪಡಿ ಕುರಿತಂತೆ ಬಂದಂತಹ ಅರ್ಜಿಗಳನ್ನು ಪರಿಶೀಲಿಸಿದಾಗ ಕಳೆದ ಏಳು ತಿಂಗಳು ಮೇಲ್ಪಟ್ಟ ಪ್ರಕರಣಗಳು ಬಾಕಿ ಇರುತ್ತವೆ. ಈ ಪ್ರಕರಣಗಳಿಗೆ ಗ್ರಾಮ ಲೆಕ್ಕಾಧಿಕಾರಿ ಮತ್ತು ಕಂದಾಯ ಪರಿವೀಕ್ಷಕರಿಂದ ವರದಿ ಕೋರಿದ್ದು, ಇದುವರೆವಿಗೂ ಅವರುಗಳಿಂದ ವರದಿ ಬಾರದೇ ಇರುವುದು ಈ ಬಗ್ಗೆ ತಹಶೀಲ್ದಾರ್‌ರಾಗಲೀ, ಸಹಾಯಕ ಆಯುಕ್ತರಾಗಲೀ ಮೇಲ್ವಿಚಾರಣೆ ನಡೆಸದೇ ಇರುವುದು ವಿಷಾಧನೀಯ. ಕೆಲ ಅರ್ಜಿದಾರರು ಪಹಣಿ ತಿದ್ದುಪಡಿಗೋಸ್ಕರ ತಾಲ್ಲೂಕು ಕಛೇರಿಗೆ ಅರ್ಜಿ ಸಲ್ಲಿಸಿದ್ದರೂ ಯಾರೂ ಸ್ಪಂದಿಸದೇ ಸುಮ್ಮನೇ ಅಲೆದಾಡಿಸುತ್ತಿರುವುದಾಗಿ ಮನವಿ ಮಾಡುತ್ತಾ ವಿಳಂಬಕ್ಕೆ ಕಾರಣರಾದವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವಂತೆ ಸಾರ್ವಜನಿಕರು ಮನವಿ ಮಾಡಿರುತ್ತಾರೆ. ಉದಾಹರಣೆಗೆ: 753/10.4.2008, 853/11.4.2008, 1639/26.4.2008, 1841/30.4.2008, 1589/26.4.2008, 1958 & 1959/30.5.2008, 2138/13.5.2008, 1839/24.5.2008.
10) ತಹಶೀಲ್ದಾರರ ಪ್ರವಾಸದ ಕಾರ್ಯಕ್ರಮ ಹಾಗೂ ವಾರ್ಷಿಕ ತಪಾಸಣೆಯ ಕಾರ್ಯಕ್ರಮವನ್ನು ಪರಿಶೀಲಿಸಿದಾಗ ಪ್ರತಿ ತಿಂಗಳು ನಿಗಧಿಪಡಿಸಿದ ಕಾರ್ಯಕ್ರಮದಂತೆ ಕೇವಲ ಒಂದು ಅಥವಾ ಎರಡು ತಪಾಸಣೆಗಳನ್ನು ಕೈಗೊಂಡಿದ್ದು, ನಿಗಧಿತ ಕಾರ್ಯಕ್ರಮದಂತೆ ಎಲ್ಲಾ ದಫ್ತರ್ ತಪಾಸಣೆಯನ್ನು ಮಾಡದೇ ಇರುವುದು ಕಂಡು ಬಂದಿರುತ್ತದೆ. ಅಲ್ಲದೇ ಕೈಗೊಂಡ ದಫ್ತರ್ ತಪಾಸಣೆಯನ್ನು ಪರಿಶೀಲಿಸಿದಾಗ ಸಮರ್ಪಕವಾಗಿ ತಪಾಸಣೆ ನಡೆಸದೇ ಇರುವುದು ಕೇವಲ ತೋರ್ಪಡೆಗಾಗಿ ಮಾಡಿದಂತೆ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಉದಾಹರಣೆಗೆ ಕಸಬಾ ಹೋಬಳಿಯ ರಾಜಸ್ವ ನಿರೀಕ್ಷಕರ ದಫ್ತರ್ ತಪಾಸಣೆಯನ್ನು ಕೈಗೊಂಡಿದ್ದು, ವರದಿಯಲ್ಲಿ ಪಿಂಚಣಿ ಯೋಜನೆಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಇಟ್ಟಿಲ್ಲವೆಂದು ನಮೂದಿಸಿದ್ದು, ಮುಂದೆ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ತಿಳಿಸದೇ ಮೌನವಹಿಸಿರುತ್ತಾರೆ. ಕಸಬಾ ಹೋಬಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿಗಳು ಮಂಜೂರಾತಿಗಾಗಿ ಬರುವುದು ಸಾಮಾನ್ಯ ಆದರೆ ಕಂದಾಯ ಪರಿವೀಕ್ಷಕರು ಮಾಹಿತಿ ಇಡದೇ ಇರುವುದು ಅವರ ಕಾರ್ಯವೈಖರಿಯ ಲೋಪವನ್ನು ಎತ್ತಿ ತೋರಿಸುತ್ತದೆ. ಇದರಿಂದ ಸರ್ಕಾರದ ಯೋಜನೆಗಳು ಸಾರ್ವಜನಿಕರಿಗೆ ತಲುಪದೇ ಇರಲು ಪ್ರಮುಖ ಕಾರಣರಾಗಿರುತ್ತಾರೆ.

ತಹಶೀಲ್ದಾರ್ ದಾವಣಗೆರೆ ತಾಲ್ಲೂಕು ಇವರು ಆಡಳಿತವನ್ನು ಪರಿಣಾಮಕಾರಿಯಾಗಿ ಮತ್ತು ಸಮರ್ಪಕವಾಗಿ ನಿರ್ವಹಿಸದೇ ಇರುವುದು, ಈ ಮೇಲಿನ ನ್ಯೂನ್ಯತೆಗಳಿಂದ ಕಂಡುಬಂದಿದ್ದು ಅಲ್ಲದೆ ಸದರಿಯವರು ಸರ್ಕಾರದ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ಸಹ ವಿಫಲರಾಗಿದ್ದಾರೆಂದು ತಿಳಿಸಿ ಸದರಿಯವರ ಮೇಲೆ ಶಿಸ್ತು ಕ್ರಮ ಜರುಗಿಸಲು ಮಾನ್ಯ ಕಂದಾಯ ಸಚಿವರು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಕಂದಾಯ ಸಚಿವರ ವರದಿಯನ್ನು ಪರಿಶೀಲಿಸಲಾಗಿ ತಹಶೀಲ್ದಾರ್ ದಾವಣಗೆರೆ ತಾಲ್ಲೂಕು ಶ್ರೀ ಜಿ.ಹೆಚ್. ನಾಗಹನುಮಯ್ಯ ಇವರು ಕಛೇರಿಯ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಅಲ್ಲದೆ ಸರ್ಕಾರದ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ವಿಫಲರಾಗಿ ಕರ್ತವ್ಯಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಂಇ 55 ಎಡಿಇ 2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್ ದಾವಣಗೆರೆ ತಾಲ್ಲೂಕು ಇವರ ವಿರುದ್ಧದ ಶಿಸ್ತು ಕ್ರಮ ಬಾಕಿಯಿರಿಸಿ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 10ರನ್ವಯ ಅವರನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇರಿಸಿ ಆದೇಶಿಸಲಾಗಿದೆ.

ಸದರಿ ಅಧಿಕಾರಿಗಳು ನಿಯಮಾನುಸಾರ ನಿರ್ವಹಣಾ ಭತ್ಯೆ (subsistence allowance) ಪಡೆಯಲು ಅರ್ಹರಾಗಿರುತ್ತಾರೆ.

ಜಿಲ್ಲಾಧಿಕಾರಿಗಳ ಪೂರ್ವಾನುಮತಿಯಿಲ್ಲದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1677

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## FOREST, ECOLOGY AND ENVIRONMENT SECRETARIAT

**Sub :** Diversion of 27.98 ha. of forest land in Kudrekonda SF, Honnali Range of Davangere Forest Division for establishing 17.40 MW (Revised 43.50 MW) Wind Power Project in favour of M/s Sarjan Realities Ltd., Bangalore.

**Read :**
1. Letter No. A5(5)GFL. Wind Power CR.2/06-07, dated 19-6-2006 of Principal Chief Conservator of Forests, Bangalore.
2. State Government letter No. FEE 123 FLL 2006, dated 1-9-2006.
3. Letter No.4-KRC252/2006-BAN/2112, dt: 22-2-2007 of Government of india, Ministry of Environment and Forests, Regional Office, Southern Zone, Bangalore.
4. Letter No.A5(5)GFL.CR.-2/06-07, dated 7-5-2008 of Principal Chief Conservator of Forests, Bangalore.
5. State Government letter No. FEE 123 FLL 2006, dated 29-5-2008.
6. Letter No.4-KRC252/2006-BAN/2593, dated 27-6-2008 of Government of India, Ministry of Environment and Forests, Regional Office, Sothern Zone, Bangalore.

**Preamble:**

The Principal Chief Conservator of Forests, Bangalore vide his letter dated: 19-6-2006 read at I above has submitted the proposal to obtain the approval of Government of India under Section 2 of Forest (Conservation) Act, 1980 for diversion of 27.98 ha. of forest land in Kudrekonda SF, Honnali RAnge of Davangere Forest Division for establishing 17.40 MW Wind Power Project in favour of M/s Sarjan Realities Ltd., Bangalore subject to certain conditions.

Accordingly the proposal was recommended to Government of India vide State Government letter dated 1-9-2006 read at (2) above.

The Government of India, Ministry of Environment and Forests, Regional office, Bangalore vide their letter dated 22-2-2007 from at (3) above has given its approval in Principle (Stage-I) for diversion of 27.98 ha. of forest land in Kudrekonda SF, Honnali Range of Davangere Forest Division for establishing 17.40 MW Wind Power Project in favour of M/s Sarjan Realities Ltd., Bangalore subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 7-5-2008 read at (4) above furnished the compliance report and the same has been sent to Government of India vide State Government letter dated 29-5-2008 read at (5) above.

Government of India Ministry of Environment and Forests, Regional Office, South Zone, Bangalore vide their letter dated 27-6-08 read at (6) above has conveyed its approval (Stage-II) under Section 2 of Forest (Conservation) Act, 1980 for diversion of 27.98 ha. of forest land in Kudrekonda SF, Honnali Range of Davangere Forest Division for establishing 17.40 MW (revised to 43.50 MW) Wind Power Project in favour of M/s Sarjan Realities Ltd., Bangalore subject to certain conditions.

The proposal has been examined in detail and hence the order.

**Government Order No. FEE 123 FLL 2006, Bangalore, Dated 15th October 2008**

In the circumstances explained in the preamble above, Government is pleased to accord sanction under Section 2 of Forest (Conservation) Act, 1980 for diversion of 27.98 ha. of forest land in Kudrekonda SF, Honnali Range of Davangere Forest Division for establishing 17.40 MW (revised 43.50 MW) Wind Power Project in favour of M/s Sarjan Realities Ltd., Bangalore subject to the following conditions.

1. The legal status of the forest land shall remain unchanged.
2. Compensatory Afforestation shall be raised over 27.98 ha. of identified non-forest land in Sy.No. 225 of Kakabalu village, Hospet Taluk, Bellary District at the cost of user agency. The State Government shall obtain prior permission of Central Government for change of location and schedule of CA if any.
3. Non-forest land for compensatory afforestation shall be notified by the State Government as RF/PF under Indian Forest Act 1927 or the State Forest Act within a period of 6 months and Nodal Officer (FCA) shall report the compliance within 6 months.
4. The user agency shall demarcale the project area by creating cairns (60 cm high) with available stones and indicate the marking of forward and backward bearing the cairns. After construction of approach road as per the project plan, the cairns shall be substituted by four feet high RCC pillars at project cost indicating on each pillar at the forward and backward bearing as well as distance between the adjacent pillars.
5. The alignment of roads in the proposed area shall be done by a recognized firm and got approved by the Deputy Conservator of Forests concerned before implementation of the project.
6. The funds received from the user agency towards CA, lease rent and NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 immediately under intimation to Government of India.
7. The lease period shall be for 30 years as per the guidelines issued by MOEF vide letter No. 8-84/2002-FC, dated 14-5-2004. In case the user agency proposes to transfer the lease favour of developers, it shall be done wihtin a period of 4 years from the date of issue of this approval. In case the developers fail to develop wind farm, the land shall be reverted back to Forest Department without any compensation.
8. The vane tips of the wind turbine shall be painted with orange colour to avoid bird hits. The location of the wind mill shall be such that it does not stand in the migratory path of the birds and is not near the breeding sites of the migratory birds.
9. The lease rent of Rs. 30,000/- per MW is to be realised from the user agency shall be utilized in providing gas connections to the local villagers under the joint Forest Management Programme and the other conservation measures.

10. About 65-70% of leased out area in the wind farm shall be utilized for developing medicinal plant gardens, if possible, by the State Forest Department at the project cost. For this purpose, the help of National Medicinal Plant Board in creating corridors of medicinal plant gardens may be taken. The intervening areas between two wind mills footprints should also be planted up by dwarf species of trees at the project cost.
11. Soil and moisture conservation measures like contour treaching shall be taken up on the hillocks supporting the wind mill at the cost of user agency.
12. Adequate fire protection measures, including employment of fire watchers and maintenance of fire lines etc., shall be undertaken by the user agency in the project area at its own cost.
13. Within the perimeters of wind farm, smaller turbines may be allowed for optimisation of wind energy.
14. The Wind turbines/wind mills to be used as forest land and the applicability of such technology in the country should have general recognition of the Ministry of Non-Conventional Energy Sources, Government of India.
15. The State Government shall ensure that the project area does not form part of any National Park/Sanctuary.
16. The total forest area utilized for the project shall not exceed 27.98 ha. and the same shall be utilised for the purpose for which it is diverted.
17. In case the land is not used for the stipulated purposes with in two years or when it no longer needed for the stipulated purpose the area should be forfeited to the Forest Department under Section 82 of Karnataka Forest Act, 1963. The Deputy Conservator of Forests, Davangere division is authorised to take necessary action in this regard. No residential buildings shall be permitted in the proposed area.
18. The user agency has to pay the lease rent as fixed by the Government at the time of sanction and any subsequent orders in this regard.
19. Karnataka Forest Act 1963 and Rules 1969 will be applicable for any violation.
20. Compensatory afforestation shall be raised at the cost of user agency over equivalent non-forest land at the rate of prevailing at the time of approval (at present it is Rs. 84,000/- per ha. as per Government Order No. FEE 102 FAP 2008, dated 15-10-2008).
21. The user agency has to pay the Net present value (NPV) fixed by Government vide Notification No. FEE 247 FGL 2002, dated 17-1-2004.
22. The user agency has to abide by all the terms and conditions as laid by Government of India, MoEF as per guidelines dated: 14-5-2004.
23. Only minimum number of trees shall be cut based on actual requirement of the project and user agency shall pay the extraction and transportaion charges of trees estimated by the Deputy Conservator of Forests from the proposed land if extracted.
24. Any other condition imposed by the Government of India/Government of Karnataka and Principal Chief Conservator of Forests will have to be abided by the lessee.

By order and in the name of the Governor of Karnataka,

PR. 1481

**P.R. KALAVATHI**

Under Secretary to Government,

Forest, Ecology and Environemnt Department.

**INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT**

**ADDENDUM**

**No. ITD 02 MDA 2009, Bangalore-01, Dated 16th January 2009.**

**Sub :** Approval of the project proposal of M/s. Patel Enginnering Limited for establishment of two separate "Sector Specifics SEZ through two SPVs created by the subsidiaries of M/s. patel Engineering Limited namely M/s. Heera Realcon Pvt. Ltd., and M/s. Hebe Infracon Pvt. Ltd. for establishment of Electronic Hardware/Software/IT and ITES SEZs.

In view of the recommendation of the 16th State High Level Clearance Committee (SHLCC) Meeting held on 19-11-2008, in the order portion of Government Order No. ITD 32 MDA 2007 (14) dated 17-3-2008 the following words shall be added to the condition laid under "INFRASTRUCTURE FACILITIES"-

**'LAND':** KIADB to consider the request of the company for approval of building plan by KIADB as per its norms."

By order and in the name of the Governor of Karnataka,

PR. 316

**M.V. KRISHNAMURTHY**

Under Secretary to Government,
Information Technology, Biotechnology and
Science and Technology Department.

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಐ 19 ಎಸ್‌ಜಿಎಫ್ 2008(4), ಬೆಂಗಳೂರು, ದಿನಾಂಕ 5ನೇ ಜನವರಿ 2009**

**ವಿಷಯ :** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಪ್ರಸ್ತಾವನೆ :**

ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008(4), ದಿನಾಂಕ 2–1–2009ರಲ್ಲಿನ ಆದೇಶದ ಅನುಬಂಧದಲ್ಲಿರುವ ಕ್ರಮ ಸಂಖ್ಯೆ 13ರಲ್ಲಿರುವ ಗೋದಾವರಿ ಶುಗರ್ಸ್ (ಲಿ)ರವರ ಸಾಗಾಣಿಕೆ ಸಹಾಯಧನ ರೂ. 81,57,266/– ಗಳನ್ನು ರೂ. 75,29,966/–ಗಳೆಂದು ಹಾಗೂ ಕ್ರಮ ಸಂಖ್ಯೆ 15ರಲ್ಲಿರುವ ಶ್ಯಾಮನೂರ್ ಶುಗರ್ಸ್ (ಲಿ) ರವರ ಸಾಗಾಣಿಕೆ ಸಹಾಯಧನ ರೂ. 30,04,199/–ಗಳನ್ನು ರೂ. 30,04,119/–ಗಳೆಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.288

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ ಸಿಆಸುಇ 93 ಸೇನಿಸಿ 2008, ಬೆಂಗಳೂರು, ದಿನಾಂಕ 2ನೇ ಜನವರಿ 2009**

ದಿನಾಂಕ 25ನೇ ಸೆಪ್ಟೆಂಬರ್ 2008ರ ಅಧಿಸೂಚನೆ ಸಂಖ್ಯೆ: ಸಿಆಸುಇ 48 ಸೇನಿಸಿ 2007 ರಲ್ಲಿರುವ "2. ನಿಯಮ 23ರ ತಿದ್ದುಪಡಿ" ಎಂಬ ಶೀರ್ಷಿಕೆಯಡಿಯಲ್ಲಿರುವ "ಉಪನಿಯಮ (2)" ಎಂಬ ಪದಕ್ಕೆ ಬದಲಾಗಿ "ಉಪನಿಯಮ (3)" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.272

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

## HOME SECRETARIAT

**Sub :** Constitution of a Review Committee for reviewing the orders permitting the telephone tapping-Orders.

**Read :** 1. Government Order No. HD 43 PCR 2008, dated 25-2-2004.
2. Government Order No. HD 96 PCR 2008, dated 31-3-2008.

**Preamble:**

In Government Order No. HD 96 PCR 2008, dated 31-3-2008 read above a review committee had been constituted to check and rule out arbitrariness in the exercise of power under section 5(2) of the Indian Telegraph Act 1885. It is considered necessary to reconstitute this committee as below:

**ORDER**

**Government Order No. HD 198 PCR 2008, Bangalore, Dated 30th October 2008**

Government are pleased to reconstitute the Review Committee to check and rule out arbitrariness in the exercise of power under section 5(2) of the Indian Telegraph Act 1885 as follows:

| 1 | The Chief Secretary to Government of Karnataka | Chairman |
|---|---|---|
| 2 | The Additional Chief Secretary to Government of Karnataka | Member |
| 3 | The Secretary to Government, Law Department | Member |

By order and in the name of the Governor of Karnataka,

PR. 276

**P. SHIVARAMA BHAT**
Under Secretary to Government (Crimes),
Home Department.

## ಆರ್ಥಿಕ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಡಿ.ಜೆ. ಹಳ್ಳಿ, ಆನೇಕಲ್ ತಾಲ್ಲೂಕು ಮತ್ತು ಕೋಲಾರ ಜಿಲ್ಲೆಯ ನರಸಾಪುರ, ಟೇಕಲ್ ಗ್ರಾಮ ಮತ್ತು ಕೆ.ಜಿ.ಎಫ್. ನಲ್ಲಿ ವಿಷಪೂರಿತ ಮದ್ಯಸೇವನೆಯಿಂದ ಹಲವಾರು ಜನರು ಮೃತಪಟ್ಟಿರುವ ಬಗ್ಗೆ ಅಬಕಾರಿ ಇಲಾಖೆಯ ಅಧಿಕಾರಿಗಳನ್ನು ಕರ್ತವ್ಯಲೋಪಕ್ಕಾಗಿ ಅಮಾನತ್ತುಗೊಳಿಸಲಾಗಿರುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಇ/91/ಇಪಿಎಸ್/2008, ದಿನಾಂಕ 20–5–2008.
2. ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008(1), ದಿನಾಂಕ 20–5–2008.
3. ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008(2), ದಿನಾಂಕ 20–5–2008.
4. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ/ಬಿಎನ್‌ಜಿ/09/ಡಿಎಸ್‌ಸಿ(1)/ 2008, ದಿನಾಂಕ 23–10–2008.
5. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ/ಬಿಎನ್‌ಜಿ/10–ಎ/ಡಿಎಸ್‌ಸಿ(1)/2008, ದಿನಾಂಕ 23–10–2008.
6. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ/ಬಿಎನ್‌ಜಿ/10/ಡಿಎಸ್‌ಸಿ(1)/ 2008, ದಿನಾಂಕ 23–10–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಕೋಲಾರ ಜಿಲ್ಲೆಯ ನರಸಾಪುರ, ಟೇಕಲ್ ಗ್ರಾಮ ಮತ್ತು ಕೆ.ಜಿ.ಎಫ್.ನಲ್ಲಿ ದಿನಾಂಕ 17–5–2008 ರಂದು ವಿಷಪೂರಿತ ಮದ್ಯ ಸೇವನೆಯಿಂದ 21 ಜನ ಮೃತಪಟ್ಟಿರುವುದರಿಂದ ಸಂಬಂಧಪಟ್ಟ ಜಾಗೃತ ದಳದ ಅಧಿಕಾರಿಗಳು ವಿಷಪೂರಿತ ಮದ್ಯ ಲಭ್ಯತೆಯನ್ನು ತಡೆಗಟ್ಟುವಲ್ಲಿ ಹಾಗೂ ಇಂತಹ ಪ್ರಕರಣ ಮರುಕಳಿಸದಂತೆ ಮುಂಜಾಗರೂಕತೆ/ಅಗತ್ಯ ಕ್ರಮ ಕೈಗೊಳ್ಳಲು ವಿಫಲರಾಗಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿದ್ದರಿಂದ, ಕೋಲಾರ ಜಿಲ್ಲೆಯ ಅಂದಿನ ಅಬಕಾರಿ ಉಪ ಆಯುಕ್ತರಾದ ಶ್ರೀ ಟಿ. ಜಯರಾಂ ರವರನ್ನು ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಬೆಂಗಳೂರು ನಗರ ಜಿಲ್ಲೆಯ ಡಿ.ಜೆ. ಹಳ್ಳಿಯಲ್ಲಿ ದಿನಾಂಕ 18–5–2008ರಂದು ವಿಷಪೂರಿತ ಮದ್ಯ ಸೇವನೆಯಿಂದ ಅನೇಕ ಜನರು ಮೃತಪಟ್ಟಿರುವುದರಿಂದ ಸಂಬಂಧಪಟ್ಟ ಜಾಗೃತ ದಳದ ಅಧಿಕಾರಿಗಳು ವಿಷಪೂರಿತ ಮದ್ಯ ಲಭ್ಯತೆಯನ್ನು ತಡೆಗಟ್ಟುವಲ್ಲಿ ಹಾಗೂ ಇಂತಹ ಪ್ರಕರಣ ಮರುಕಳಿಸದಂತೆ ಮುಂಜಾಗರೂಕತೆ/ಅಗತ್ಯ ಕ್ರಮ ಕೈಗೊಳ್ಳಲು ವಿಫಲರಾಗಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ್ಯ ತೋರಿದ್ದರಿಂದ ಇಂದಿರಾನಗರ (ಜಾರಿ ಮತ್ತು ತನಿಖಾ ದಳ), ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅಂದಿನ ಅಬಕಾರಿ ಅಧೀಕ್ಷಕರಾದ (ಪ್ರಭಾರ) ಶ್ರೀ ಜಿ. ವೆಂಕಟರಮಣಯ್ಯ, ರವರನ್ನು ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕಿನಲ್ಲಿ ದಿನಾಂಕ 19–5–2008ರಂದು ವಿಷಪೂರಿತ ಮದ್ಯ ಸೇವನೆಯಿಂದ ಹಲವು ಜನರು ಮೃತಪಟ್ಟಿರುವುದರಿಂದ ಸಂಬಂಧಪಟ್ಟ ಜಾಗೃತ ದಳದ ಅಧಿಕಾರಿಗಳು ವಿಷಪೂರಿತ ಮದ್ಯ ಲಭ್ಯತೆಯನ್ನು ತಡೆಗಟ್ಟುವಲ್ಲಿ ಹಾಗೂ ಇಂತಹ ಪ್ರಕರಣ ಮರುಕಳಿಸದಂತೆ ಮುಂಜಾಗರೂಕತೆ/ಅಗತ್ಯ ಕ್ರಮ ಕೈಗೊಳ್ಳಲು ವಿಫಲರಾಗಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ ತೋರಿದ್ದರಿಂದ ಜಯನಗರ, ಬೆಂಗಳೂರು ಇಲ್ಲಿಯ ಜಾರಿ ಮತ್ತು ತನಿಖಾ ದಳದ ಅಂದಿನ ಅಬಕಾರಿ ಅಧೀಕ್ಷಕರಾದ ಶ್ರೀ ಬಿ. ಸೋಮಶೇಖರಪ್ಪ ರವರನ್ನು ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (4), (5) ಮತ್ತು (6)ರಲ್ಲಿರುವ ಅಬಕಾರಿ ಆಯುಕ್ತರ ಪತ್ರಗಳಲ್ಲಿ ಪ್ರಸ್ತುತ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಜಂಟಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಅಭಿಪ್ರಾಯ ವ್ಯಕ್ತಪಡಿಸಿ, ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಮೇಲ್ಕಂಡ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ, ಕರ್ತವ್ಯಕ್ಕೆ ಪುನರ್ ನೇಮಕಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ವಿಷಯವನ್ನು ಪರಿಶೀಲಿಸಿ, ಶ್ರೀ ಟಿ.ಜಯರಾಂ, ಅಬಕಾರಿ ಉಪ ಆಯುಕ್ತರು, ಶ್ರೀ ಜಿ.ವೆಂಕಟರಮಣಯ್ಯ, ಅಬಕಾರಿ ಅಧೀಕ್ಷಕರು ಮತ್ತು ಶ್ರೀ ಬಿ. ಸೋಮಶೇಖರಪ್ಪ, ಅಬಕಾರಿ ಅಧೀಕ್ಷಕರು ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿ ಅಧಿಕಾರಿಗಳ ಅಮಾನತ್ತಿನ ಆದೇಶವನ್ನು ತೆರವುಗೊಳಿಸಿ, ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008.**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಶ್ರೀ ಟಿ. ಜಯರಾಂ, ಅಬಕಾರಿ ಉಪ ಆಯುಕ್ತರು, ಶ್ರೀ ಜಿ. ವೆಂಕಟರಮಣಯ್ಯ, ಅಬಕಾರಿ ಅಧೀಕ್ಷಕರು ಮತ್ತು ಶ್ರೀ ಬಿ. ಸೋಮಶೇಖರಪ್ಪ, ಅಬಕಾರಿ ಅಧೀಕ್ಷಕರು ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರಿಕ ಸೇವೆ (ಸಿ.ಸಿ.ಎ.) ನಿಯಮ 1957ರ ನಿಯಮ 10(5)(C)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ ಮೇಲ್ಕಂಡ ಮೂವರು ಅಧಿಕಾರಿಗಳನ್ನೂ ಸೇವೆಗೆ ಪುನರ್ ನೇಮಕಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 304

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಸಿಆಸುಇ 93 ಸೇನಿಸಿ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009.**

ದಿನಾಂಕ 25ನೇ ಸೆಪ್ಟೆಂಬರ್ 2008ರ ಅಧಿಸೂಚನೆ ಸಂಖ್ಯೆ: ಸಿಆಸುಇ 48 ಸೇನಿಸಿ 2007ರಲ್ಲಿರುವ "2. ನಿಯಮ 23ರ ತಿದ್ದುಪಡಿ" ಎಂಬ ಶೀರ್ಷಿಕೆಯಡಿಯಲ್ಲಿರುವ "ಉಪ ನಿಯಮ (2)" ಎಂಬ ಪದಕ್ಕೆ ಬದಲಾಗಿ "ಉಪ ನಿಯಮ (3)" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.319

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾನಿಯಮಗಳು–2)

## ಶಿಕ್ಷಣ ಸಚಿವಾಲಯ

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಮುಂಬಡ್ತಿ ಸಮಿತಿ ರಚನೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 12 ಎಸ್‌ಡಿಇ 2007, ದಿನಾಂಕ 29–1–2008.

2. ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 250 ಡಿಪಿಐ 2006, ದಿನಾಂಕ 22–2–2008.

3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪ್ರಸ್ತಾವನೆ ಸಂಖ್ಯೆ: ಸಿ1(2) ಇ.ಮು.ಸ.–07/2008–09, ದಿನಾಂಕ 23–7–2008 ಮತ್ತು 19–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ 29–1–2008ರ ಸರ್ಕಾರದ ಅಧಿಸೂಚನೆ ಹಾಗೂ ಉಲ್ಲೇಖ (2) ದಿನಾಂಕ 22–2–2008ರ ಸರ್ಕಾರದ ಸುತ್ತೋಲೆಯನ್ವಯ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಮತ್ತು ಹೆಚ್ಚುವರಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರುಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದಗಳಿಗೆ ನೇಮಕಾತಿ ಪ್ರಾಧಿಕಾರವೆಂದು ನಿಗಧಿಪಡಿಸಿ, ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರ ದಿನಾಂಕ 19–12–2008ರ ಪ್ರಸ್ತಾವನೆಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ರವರು ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದದ ಹುದ್ದೆಗಳಿಗೆ ಬಡ್ತಿ ನೀಡುವ ಸಲುವಾಗಿ ಆಯುಕ್ತಾಲಯವಾರು ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಬೇಕಾಗಿರುವುದರಿಂದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಮತ್ತು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಆಯುಕ್ತಾಲಯವಾರು ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಿ, ಸರ್ಕಾರದ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 464 ಡಿಪಿಐ 2008, ಬೆಂಗಳೂರು, ದಿನಾಂಕ: 6ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಮತ್ತು ಹೆಚ್ಚುವರಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರುಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ, ಗ್ರೂಪ್–'ಬಿ' ವೃಂದದ ಹುದ್ದೆಗಳಿಗೆ ಬಡ್ತಿ ನೀಡುವ ಸಲುವಾಗಿ ಈ ಕೆಳಕಂಡ ಆಯುಕ್ತಾಲಯವಾರು ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಿ, ಆದೇಶಿಸಲಾಗಿದೆ.

**ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು**

| ಕ್ರಮ ಸಂಖ್ಯೆ | ಹುದ್ದೆ | ಸಮಿತಿಯಲ್ಲಿನ ಪದನಾಮ |
|---|---|---|
| 1 | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2 | ನಿರ್ದೇಶಕರು (ಪ್ರೌಢ ಶಿಕ್ಷಣ), ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಸಹ ನಿರ್ದೇಶಕರು (ಆಡಳಿತ), ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

**ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ**

| ಕ್ರಮ ಸಂಖ್ಯೆ | ಹುದ್ದೆ | ಸಮಿತಿಯಲ್ಲಿನ ಪದನಾಮ |
|---|---|---|
| 1 | ಹೆಚ್ಚುವರಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ | ಅಧ್ಯಕ್ಷರು |
| 2 | ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ | ಸದಸ್ಯರು |
| 3 | ಸಹ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ | ಸದಸ್ಯ ಕಾರ್ಯದರ್ಶಿ |

**ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ**

| ಕ್ರಮ ಸಂಖ್ಯೆ | ಹುದ್ದೆ | ಸಮಿತಿಯಲ್ಲಿನ ಪದನಾಮ |
|---|---|---|
| 1 | ಹೆಚ್ಚುವರಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ | ಅಧ್ಯಕ್ಷರು |
| 2 | ನಿರ್ದೇಶಕರು, ಹೆಚ್ಚುವರಿ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ. | ಸದಸ್ಯರು |
| 3 | ಸಹ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.303

**ಹೆಚ್.ಟಿ. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು-1,2)

**ವಿಷಯ :** ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳಿಗೆ ಅನ್ವಯಿಸುವಂತೆ ರಚಿಸಲಾಗಿರುವ ಸಮಿತಿಯ ಸರ್ಕಾರೇತರ ಸದಸ್ಯರಾದ ಶ್ರೀ ಎಂ.ಬಿ. ಸಾವಜ್ಜಿಯವರ ಇವರನ್ನು ಸಮಿತಿಯಿಂದ ಕೈಬಿಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮತ್ತು ಕಾರ್ಯದರ್ಶಿ/ಖಜಾಂಚಿಗಳು, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ನಿಧಿ, ಬೆಂಗಳೂರು ಇವರ ಪತ್ರ ಸಂಖ್ಯೆ. ಎಫ್1/ ಶಿಕನಿ/ಆಡಳಿತ/ರಾಜ್ಯ ಸಮಿತಿ/39/2006-07, ದಿನಾಂಕ 10-10-2008.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಶಿಕ್ಷಕರ ಕಲ್ಯಾಣ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳ ಆಡಳಿತ ನಿರ್ವಹಣೆಗಾಗಿ 09 ಅಧಿಕಾರಯುಕ್ತ ಸದಸ್ಯರು ಹಾಗೂ 03 ಅಧಿಕಾರೇತರ ಸದಸ್ಯರನ್ನೊಳಗೊಂಡ ಏಕರೂಪ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ: ಇಡಿ 198 ಟಿಪಿಯು 2006, ದಿನಾಂಕ 12-7-2007ರಲ್ಲಿ 02 ವರ್ಷಗಳ ಅವಧಿಗೆ ರಚಿಸಲಾಗಿದೆ. ಇದರಲ್ಲಿನ ಅಧಿಕಾರೇತರ ಸದಸ್ಯರು 02 ವರ್ಷಕ್ಕೊಮ್ಮೆ ಸಮಿತಿಯ ಪುನರ್‌ರಚನೆಯ ಸಂದರ್ಭದಲ್ಲಿ ಮಾತ್ರ ಬದಲಾಗುತ್ತಾರೆ.

ಈ ಆದೇಶದಲ್ಲಿನ ಅಧಿಕಾರೇತರ ಸದಸ್ಯರಲ್ಲಿ ಒಬ್ಬರಾದ ಶ್ರೀ ಎಂ.ಬಿ. ಸಾವಜ್ಜಿಯವರ, ಇವರ ವಿರುದ್ಧ ಕರ್ನಾಟಕ ರಾಜ್ಯ ಸೆಕೆಂಡರಿ ಶಿಕ್ಷಕರ ಸಂಘದವರು ಆಕ್ಷೇಪಣೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದರಿಂದ, ಈ ಆಕ್ಷೇಪಣೆಗಳನ್ನು ಪರಿಶೀಲಿಸಿ, ಶ್ರೀ ಎಂ.ಬಿ. ಸಾವಜ್ಜಿಯವರ ಇವರನ್ನು ದಿನಾಂಕ 12-7-2007ರ ಆದೇಶದಲ್ಲಿನ ಸದರಿ ಸಮಿತಿಯ ಸದಸ್ಯತ್ವದಿಂದ ಕೈಬಿಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಮೇಲೆ ಓದಲಾದ ದಿನಾಂಕ 10-10-2008ರ ಪತ್ರದಲ್ಲಿ ವರದಿ ನೀಡಿರುತ್ತಾರೆ. ಅವರ ವರದಿಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 214 ಟಿಪಿಯು 2008, ಬೆಂಗಳೂರು, ದಿನಾಂಕ: 7ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ ಈ ಮೂರು ನಿಧಿಗಳ ಆಡಳಿತ ನಿರ್ವಹಣೆಗಾಗಿ ಹೊರಡಿಸಿರುವ ದಿನಾಂಕ 12-7-2007ರ ಸರ್ಕಾರದ ಆದೇಶ ಸಂಖ್ಯೆ: ಇಡಿ 198 ಟಿಪಿಯು 2006 ರಲ್ಲಿನ ಏಕರೂಪ ಸಮಿತಿಯ ಸರ್ಕಾರೇತರ ಸದಸ್ಯರ ಸ್ಥಾನದಿಂದ ಶ್ರೀ ಮಹದೇವಪ್ಪ ಬಸಪ್ಪ ಸಾವಜ್ಜಿಯವರ, ಬಸವೇಶ್ವರನಗರ, ಹಿರೇಕೆರೂರು, ಹಾವೇರಿ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೈಬಿಡಲಾಗಿದೆಯೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.301

**ಎಂ. ಪ್ರಭುಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರೌಢ),

ಶಿಕ್ಷಣ ಇಲಾಖೆ

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಬೀಜ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಉನ್ನತ್ತೀಕರಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಬೀಜ ನಿಗಮವು ರಾಜ್ಯ ರೈತರಿಗೆ ಉತ್ತಮ ಗುಣ ಮಟ್ಟದ ಬಿತ್ತನೆ ಬೀಜವನ್ನು ಒದಗಿಸಿದಲ್ಲಿ ಅತ್ಯಂತ ಪ್ರಮುಖ ಸಾರ್ವಜನಿಕ ಸಂಸ್ಥೆಯಾಗಿರುತ್ತದೆ. ಕೇಂದ್ರ ಪುರಸ್ಕೃತ ಯೋಜನೆಗಳಾದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ, ರಾಷ್ಟ್ರಿಯ ಆಹಾರ ಭದ್ರತಾ ಮಿಸನ್, ಪ್ರಧಾನ ಮಂತ್ರಿಗಳ ಪುನರ್ವಸತಿ ಪ್ಯಾಕೇಜ್, ಐಸೋಪಾಮ್ (ISOPOM) ಇತ್ಯಾದಿ ಯೋಜನೆಗಳಲ್ಲಿ ಉತ್ತಮ ಗುಣಮಟ್ಟದ ಬಿತ್ತನೆ ಬೀಜದ ಸರಬರಾಜಿಗೆ ಅತಿ ಪ್ರಾಮುಖ್ಯತೆಯನ್ನು ನೀಡಿರುವುದಲ್ಲದೆ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಪ್ರಮಾಣೀಕರಿಸಿದ ಬಿತ್ತನೆ ಬೀಜ ಸರಬರಾಜಿಗೆ ಹಾಗೂ ಬೀಜೋತ್ಪಾದನೆಗೆ ಹೆಚ್ಚಿನ ಒತ್ತು ನೀಡುತ್ತಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಬೀಜ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಕೃಷಿ ನಿರ್ದೇಶಕರ ಸ್ಥಾನಮಾನಕ್ಕೆ ಉನ್ನತೀಕರಿಸಿ, ಕೃಷಿ ನಿರ್ದೇಶಕರ ಸ್ಥಾನಮಾನದ ಅಧಿಕಾರಿಯನ್ನು ನೇಮಿಸುವುದು ಅತ್ಯಂತ ಅವಶ್ಯಕವಿರುವುದಾಗಿ ಮನಗಂಡು ಸದರಿ ವಿಷಯವನ್ನು ಕರ್ನಾಟಕ ರಾಜ್ಯ ಬೀಜ ನಿಗಮದ ಆಡಳಿತ ಮಂಡಳಿಯವರು ಸಹ 216ನೇ ಆಡಳಿತ ಮಂಡಳಿಯ ಸಭೆಯಲ್ಲಿ ಚರ್ಚಿಸಿ, ಕರ್ನಾಟಕ ರಾಜ್ಯ ಬೀಜ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ಕೃಷಿ ಇಲಾಖೆಯ ನಿರ್ದೇಶಕರ ಸ್ಥಾನಮಾನದ ಅಧಿಕಾರಿಯನ್ನು ನೇಮಿಸಲು ಠರಾವು ಮಾಡಿರುತ್ತಾರೆ.

ಕರ್ನಾಟಕ ರಾಜ್ಯ ಬೀಜ ನಿಗಮದ ಆಡಳಿತ ಮಂಡಳಿಯ 216ನೇ ಸಭೆಯ ಠರಾವಿನಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ಕೃಷಿ ನಿರ್ದೇಶಕರ ಸ್ಥಾನಮಾನವುಳ್ಳ ಅಧಿಕಾರಿಯನ್ನು ನೇಮಕ ಮಾಡುವುದು ಸಮಂಜಸವಾಗಿರುತ್ತದೆಯೆಂದು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 268 ಕೃಪಸೇ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ರೂ. 26250-36500 ವೇತನ ಶ್ರೇಣಿಯ ಕೃಷಿ ನಿರ್ದೇಶಕರ ಸ್ಥಾನಮಾನಕ್ಕೆ ಉನ್ನತ್ತೀಕರಿಸಿ ಮಂಜೂರಾತಿ ನೀಡಲಾಗಿದೆ ಮತ್ತು ಈ ಹುದ್ದೆಯನ್ನು ತುಂಬಲು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 308

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಆರ್.ಸಿ. ಗೀತಾ, ಅರವಳಿಕೆ ತಜ್ಞರು, ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರ ಅನಧಿಕೃತ ಗೈರುಹಾಜರಿ ವಿರುದ್ಧ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರ ಷೋಕಾಸ್ ನೋಟೀಸ್ ಸಂಖ್ಯೆ: ಡಿಪಿಜಿ ಬೆವಿ/ವಿ/17/2006-07, ದಿನಾಂಕ 3-2-2007.
2. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರ ಆದೇಶ ಸಂಖ್ಯೆ: ಡಿಪಿಜಿ ಬೆವಿ/ವಿ/17/2006-07, ದಿನಾಂಕ 4-6-2007.
3. ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/08/2007-08, ದಿನಾಂಕ 7-3-2008.
4. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ ಬೆವಿ/ವಿ/ 17/2006-07, ದಿನಾಂಕ 12-5-2008.
5. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ ಬೆವಿ/ವಿ/ 17/2006-07, ದಿನಾಂಕ 9-9-2008.

**ಪ್ರಸ್ತಾವನೆ :**

ಡಾ: ಆರ್.ಸಿ. ಗೀತಾ, ಅರವಳಿಕೆ ತಜ್ಞರು, ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರು ದಿನಾಂಕ 15-3-2006 ರಿಂದ 1-4-2006ರ ವರೆಗೆ ರಜೆ ಮಂಜೂರಾತಿಗೆ ಅರ್ಜಿ ಸಲ್ಲಿಸಿ, ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ದಿನಾಂಕ 15-3-2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ

ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆರೋಪಿತ ವೈದ್ಯರಿಗೆ ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ಸದರಿ ನೋಟೀಸಿಗೆ ಆಪಾದಿತ ವೈದ್ಯರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ, ಈ ಪ್ರಕರಣವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆ ತೀರ್ಮಾನಿಸಿ, ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಅವರು ತೀರ್ಮಾನಿಸಿ ಅದರಂತೆ ವಿಚಾರಣೆಯನ್ನು ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಹಾಗೂ ಸಹಾಯಕ ಆಡಳಿತಾಧಿಕಾರಿ (ಆಡಿಟ್) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಮೇಲೆ (3)ರಲ್ಲಿ ಓದಲಾದ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳಾದ ಮುಖ್ಯ ಜಾಗೃತಾಧಿಕಾರಿ (ಜಾಗೃತ ಕೋಶ) ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ಇವರು ನಿಯಮಾನುಸಾರ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದು, ಈ ವಿಚಾರಣಾ ವರದಿಯಲ್ಲಿ ಡಾ: ಆರ್.ಸಿ. ಗೀತಾ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದು ಸಂಪೂರ್ಣವಾಗಿ ಸಾಬೀತಾಗಿದೆ ಎಂದು ನಿರ್ಣಯ ನೀಡಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನು ಮೇಲೆ (4)ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು ರವರು ಆಪಾದಿತ ವೈದ್ಯರಿಗೆ ಜಾರಿ ಮಾಡಿ, ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಸಲ್ಲಿಸುವಂತೆ ಸೂಚಿಸಿದ್ದರು. ಡಾ: ಆರ್.ಸಿ. ಗೀತಾ ಅರವಳಿಕೆ ತಜ್ಞರು ಸದರಿ ತಿಳುವಳಿಕೆ ಪತ್ರಕ್ಕೆ ಉತ್ತರ ನೀಡದೆ ಇರುವುದರಿಂದ ಅನಧಿಕೃತ ಗೈರುಹಾಜರಿ ಆಗಿರುವುದನ್ನು ಗಂಭೀರವಾಗಿ ಪರಿಗಣಿಸಿ, ವಿಚಾರಣೆಯಲ್ಲೂ ಕೂಡ ಇವರ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಇವರಿಗೆ ಕಠಿಣ ದಂಡನೆ ವಿಧಿಸಲು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಆಯುಕ್ತರ ಪ್ರಸ್ತಾವನೆಯನ್ನು ಹಾಗೂ ಸಂಬಂಧಿಸಿರುವ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಆರ್.ಸಿ. ಗೀತಾ, ಅರವಳಿಕೆ ತಜ್ಞರು, ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಅಧಿಕಾರಿಯಾಗಿದ್ದು, ಕಾರಣ ನೀಡದೆ, ಯಾವುದೇ ರಜಾ ಅರ್ಜಿಯನ್ನು ಸಲ್ಲಿಸದೆ, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ, ವಿಚಾರಣೆಗೆ ಹಾಜರಾಗದೆ, ತಿಳುವಳಿಕೆ ಪತ್ರಕ್ಕೆ ಸ್ಪಂದಿಸದೆ, ಸರ್ಕಾರಿ ಸೇವೆಗೆ ದಿನಾಂಕ 15–3–2006 ರಿಂದ ಈ ವರೆವಿಗೂ ಅನಧಿಕೃತ ಗೈರುಹಾಜರಿ ಆಗಿರುವುದು ಇಲಾಖಾ ವಿಚಾರಣೆಯಿಂದ ರುಜುವಾತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ), ನಿಯಮಾವಳಿಗಳು 1957ರ ನಿಯಮ 8(viii)ರನ್ವಯ ಸದರಿ ವೈದ್ಯರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಕಠಿಣ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 414 ಎಂಎಸ್ಎ 2008, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ –8(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಆರ್.ಸಿ. ಗೀತಾ, ಅರವಳಿಕೆ ತಜ್ಞರು, ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ 'ವಜಾ' ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.195

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ ವಿಧಾನ ಪರಿಷತ್ ಸದಸ್ಯರುಗಳಿಗೆ ಮೊದಲನೇ ಕಂತಾಗಿ ಬಿಡುಗಡೆ ಮಾಡಿ ಹಿಂಪಡೆದ ಅನುದಾನವನ್ನು ಮರು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 37 ಯೋವಿವಿ 2007, ದಿನಾಂಕ 11–6–2008.
2. ಸರ್ಕಾರಿ ಆದೇಶ ಸಂಖ್ಯೆ: ಯೋಇ 37 ಯೋವಿವಿ 2007, ದಿನಾಂಕ 24–7–2008.
3. ಸರ್ಕಾರಿ ಆದೇಶ ಸಂಖ್ಯೆ: ಯೋಇ 52 ಯೋವಿವಿ 2008, ದಿನಾಂಕ 6–8–2008
4. ಸರ್ಕಾರಿ ಆದೇಶ ಸಂಖ್ಯೆ: ಯೋಇ 52 ಯೋವಿವಿ 2008, ದಿನಾಂಕ 13–8–2008.
5. ಸರ್ಕಾರಿ ಆದೇಶ ಸಂಖ್ಯೆ: ಯೋಇ 52 ಯೋವಿವಿ 2008, ದಿನಾಂಕ 29–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (4)ರಲ್ಲಿ ವಿಧಾನ ಪರಿಷತ್ ಮತ್ತು ವಿಧಾನ ಸಭಾ ಸದಸ್ಯರುಗಳಿಗೆ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ ಮೊದಲನೇ ಕಂತಾಗಿ ತಲಾ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (5)ರಲ್ಲಿ ಮೈಸೂರು, ಚಿಕ್ಕಮಗಳೂರು, ಕೊಡಗು, ಬಳ್ಳಾರಿ, ದಾವಣಗೆರೆ, ಮಂಡ್ಯ ಜಿಲ್ಲೆಗಳ ವಿಧಾನ ಪರಿಷತ್ ಸದಸ್ಯರುಗಳಿಗೆ ಬಿಡುಗಡೆ ಮಾಡಿದ ಅನುದಾನವನ್ನು ಹಿಂಪಡೆಯಲಾಗಿದ್ದು, ಈಗ ಹಿಂಪಡೆಯಲಾದ ವಿಧಾನ ಪರಿಷತ್ ಸದಸ್ಯರುಗಳಾದ ಶ್ರೀ ಸಿ. ಸಿದ್ದರಾಜು (ಮೈಸೂರು) ಮತ್ತು ಶ್ರೀ ಡಾ:ಎ.ಹೆಚ್. ಶಿವಯೋಗಿ ಸ್ವಾಮಿ (ದಾವಣಗೆರೆ) ಇವರುಗಳಿಗೆ ತಲಾ ರೂ. 50.00 ಲಕ್ಷಗಳ ಅನುದಾನವನ್ನು ಮರು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 52 ಯೋವಿವಿ 2008, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2008.**

ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2008–09ನೇ ಸಾಲಿನಲ್ಲಿ ಹಿಂಪಡೆದ ಅನುದಾನದಲ್ಲಿ ಈ ಕೆಳಕಂಡ ಜಿಲ್ಲೆಗಳ ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ ರೂ. 50.00 ಲಕ್ಷಗಳಂತೆ ಮರು ಬಿಡುಗಡೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ವಿಧಾನ ಪರಿಷತ್ ಸದಸ್ಯರುಗಳ ಹೆಸರು | ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಶ್ರೀ ಸಿ. ಸಿದ್ದರಾಜು, ಮೈಸೂರು | 50.00 |
| 2 | ಶ್ರೀ ಡಾ: ಎ.ಹೆಚ್. ಶಿವಯೋಗಿಸ್ವಾಮಿ, ದಾವಣಗೆರೆ | 50.00 |
| | **ಒಟ್ಟು** | **100.00** |

ಉಳಿದ ವಿಧಾನ ಪರಿಷತ್ ಸದಸ್ಯರುಗಳಿಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಆಧರಿಸಿ ಮರು ಬಿಡುಗಡೆ ಮಾಡಲಾಗುವುದು.

ದಿನಾಂಕ 13–8–2008ರ ಆದೇಶ ಸಂಖ್ಯೆ: ಯೋಇ 52 ಯೋವಿವಿ 2008ರಲ್ಲಿ ಸೂಚಿಸಿರುವಂತೆ ಕ್ರಮ ತೆಗೆದುಕೊಳ್ಳಬಹುದೆಂದು ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.25

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ENERGY SECRETARIAT

**Sub :** Approval for implementation of Wind Power Projects of 500 MW capacity in Karnataka.

**Read :** Letter No. A1 R1 A (PS) dated 14-10-2008 of Managing Director, Karnataka Power Corporation Limited.

**Preamble:**

1. The Managing Director, Karnataka Power Corporation Limited (KPCL) vide letter read above, has informed that the KPCL Board in its meeting held on 30-9-08 had approved a Joint Venture with National Thermal Power Corporation for development of Wind Power Project. Negotiations were held with NTPC and they have agreed for a Joint Wind Power Project of 500 MW capacity in three locations in Karnataka. Six feasible locations have been obtained from KREDL. Preliminary studies have been completed. These projects are;

i) Kappatagudda (expansion of the existing KPCL Wind Project)
ii) Guledgudda
iii) Bailhongal
iv) Godachi-Ramadurga Site
v) Ramadurga-Mullur Site
vi) Saunditti Yellammana Gudda Site

2. National Thermal Power Corporation (NTPC) has come forward to invest 100% of the cost and sell entire power generated from these wind stations to Karnataka Grid at Karnataka Electricity Regulatory Commission (KERC) fixed rates. KPCL will be a facilitating partner and the role of KPCL will be limited to the following:

a) Obtaining land on lease or ownership basis for these projects.
b) Obtaining various clearances
c) Acting as a Liaison Agent and
d) Providing technicl & managerial manpower on a mutually agreeable basis for the project erection and operation.

3. Managing Director, KPCL has informed that the terms of the agreement are extremely favourable and helpful for KPCL and State of Karnataka. NTPC has come forward to invest 100% of the cost of the above projects and sell entire power generated from these projects to the Karnataka Grid. Proposal of MD, KPCL has been examined and hence the following orders issued.

**Government Order No. EN 2 PPC 2009, Bangalore, Dated 9th January 2009**

Under the circumstances expalined above, Government are pleased to accord approval for the following:

1. Development of 500 MW of Wind Power Projects by M/s. National Thermal Power Corporation at the sites indicated by Karnataka Power Corporation Limited, subject to Statutory Clearances.

2. The entire power generated from these Wind Power Projects shall be sold to appropriate distribution companies of Karnataka for which Powr Purchase Agreement shall be executed at the rate fixed by appropriate Regulatory Commission.

3. The infrastructure development charges or any other charges as fixed by Karnataka Power Corporation Limited for Techno-Commercial facilitation, for the viable wind farms shall be paid by National Thermal Power Corporation, as also the charges due to Karnataka Renewable energy Development Limited for wind power development.

4. The Government Order No. EN 2 PPC 2009 dated 5-1-2009 is hereby withdrawn with immediate effect.

By order and in the name of the Governor of Karnataka,

PR. 314

**S.J. SAMPATH KUMAR**
Under Secretary to Government,
Energy Department.

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವಿ. ಪ್ರಸನ್ನಕುಮಾರ್, ಉಪನಿರ್ದೇಶಕರು, ಭೂಮಾಪನ ಇಲಾಖೆ, ಆರ್.ಎಸ್. ಮಂಜುನಾಥ್, ದ್ವಿತೀಯ ದರ್ಜೆ ಭೂಮಾಪಕ ಇವರುಗಳನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 82 ಭೂದಾಸೇ (1) 2008, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2008.**

ಶ್ರೀ ವಿ. ಪ್ರಸನ್ನಕುಮಾರ್, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ ಮತ್ತು ಸದರಿ ಕಛೇರಿಯ ಶ್ರೀ ಆರ್.ಎಸ್. ಮಂಜುನಾಥ್, ದ್ವಿತೀಯದರ್ಜೆ ಭೂಮಾಪಕ ಇವರುಗಳು ದಿನಾಂಕ 21–11–2008ರಂದು ಬಳ್ಳಾರಿ ಜಿಲ್ಲಾ ಉಸ್ತುವಾರಿ ಸಚಿವರಾದ ಮಾನ್ಯ ಶ್ರೀ ಜಿ. ಜನಾರ್ಧನರೆಡ್ಡಿ ರವರು

ಸಾರ್ವಜನಿಕ ದೂರಿನ ಹಿನ್ನೆಲೆಯಲ್ಲಿ ಮಧ್ಯಹ್ನ 1–00 ಗಂಟೆಗೆ ಅನಿರೀಕ್ಷಿತ ಭೇಟಿ ನೀಡಿದ ಸಂದರ್ಭದಲ್ಲಿ ಕಛೇರಿಯಲ್ಲಿ ಇರಲಿಲ್ಲವಾದುದರಿಂದ ವಿಚಾರಿಸಲಾಗಿ ಶ್ರೀ ವಿ. ಪ್ರಸನ್ನಕುಮಾರ್‌ರವರು ನ್ಯಾಯಾಲಯದ ಪ್ರಕರಣಕ್ಕೆ ಸಂಬಂಧಿಸಿದಂತೆ ರಾಯಚೂರಿಗೆ ಹೋಗಿರುವುದಾಗಿ ಇವರು ಕೇಂದ್ರಸ್ಥಾನ ಬಿಡಲು ಜಿಲ್ಲಾಧಿಕಾರಿಗಳಿಂದ ಲಿಖಿತವಾಗಲಿ ಅಥವಾ ಮೌಖಿಕವಾಗಿ ಅನುಮತಿ ಪಡೆದಿರುವುದಿಲ್ಲದ ಬಗ್ಗೆ ಜಿಲ್ಲಾಧಿಕಾರಿಗಳೇ ಸ್ವತಃ ತಿಳಿಸಿರುತ್ತಾರೆ. ಅಲ್ಲದೆ ಈ ಕಛೇರಿಯಲ್ಲಿ ಅಧೀಕ್ಷಕರ ಹುದ್ದೆ ಖಾಲಿ ಇದ್ದು ತಪಾಸಣೆಯ ಸಮಯದಲ್ಲಿ ಹಾಜರಿದ್ದ ಪ್ರಭಾರಿ ಅಧೀಕ್ಷಕರು ಕಛೇರಿಗೆ ಸಂಬಂಧಿಸಿದಂತೆ ದೈನಂದಿನ ವಿಷಯಗಳ ಕುರಿತು ಮಾಹಿತಿ ಹೊಂದಿರುವುದಿಲ್ಲ. ಉಪನಿರ್ದೇಶಕರ ಅನುಪ ಸ್ಥಿತಿಯಲ್ಲಿ ಕೇಳಲಾದ ಮಾಹಿತಿ ಮತ್ತು ದಾಖಲೆಗಳನ್ನು ಹಾಜರುಪಡಿಸುವಲ್ಲಿ ಸದರಿಯವರು ವಿಫಲರಾಗಿರುತ್ತಾರೆ. ಹಾಗೂ ಸದರಿ ಅಧಿಕಾರಿಯು ಪ್ರತಿ ತಿಂಗಳು ಕೈಗೊಳ್ಳಲಾಗುವ ಅವರ ಪ್ರವಾಸ ಮತ್ತು ತಪಾಸಣೆಗೆ ಸಂಬಂಧಿಸಿದಂತೆ ಪ್ರವಾಸ ಕಾರ್ಯಕ್ರಮಗಳನ್ನು ಕಛೇರಿಯಲ್ಲಿ ಇಟ್ಟಿರುವುದಿಲ್ಲ. ಆ ಸಮಯದಲ್ಲಿ ಹಾಜರಿದ್ದ ಸಾರ್ವಜನಿಕರು ಇವರ ಕಛೇರಿಯಲ್ಲಿನ ಲಭ್ಯತೆ ಕುರಿತು ಅನೇಕ ದೂರುಗಳನ್ನು ಸ್ಥಳದಲ್ಲಿ ನೀಡಿರುತ್ತಾರೆ. ಹಾಗೂ ಶ್ರೀ ಆರ್.ಎಸ್. ಮಂಜುನಾಥ್, ದ್ವಿತೀಯದರ್ಜೆ ಭೂಮಾಪಕ ಹಾಜರಾತಿಗೆ ಸಹಿ ಮಾಡಿ ಕಛೇರಿಯಲ್ಲಿ ಹಾಜರಿರುವುದಿಲ್ಲ ಹಾಗೂ ಕಛೇರಿ ನಿರ್ವಹಣೆಯ ತೀರಾ ಅವ್ಯವಸ್ಥೆಯಿಂದ ಕೂಡಿದ್ದು, ಹಲವಾರು ಲೋಪದೋಷಗಳು ಕಂಡುಬಂದ ಹಿನ್ನೆಲೆಯಲ್ಲಿ ಇವರುಗಳು ಕರ್ತವ್ಯ ಲೋಪವೆಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರುಗಳನ್ನು ಸೇವೆಯಿಂದ ಅಮಾನತುಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುತ್ತದೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ. ಪ್ರಸನ್ನ ಕುಮಾರ್, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಶ್ರೀ ಆರ್.ಎಸ್. ಮಂಜುನಾಥ್, ದ್ವಿತೀಯ ದರ್ಜೆ ಭೂಮಾಪಕ ಜಿಲ್ಲಾಧಿಕಾರಿಗಳ ಕಛೇರಿ, ಭೂ ಮಾಪನ ಇಲಾಖೆ, ಬಳ್ಳಾರಿ ಅವರುಗಳ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವಿ. ಪ್ರಸನ್ನಕುಮಾರ್, ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಉಪನಿರ್ದೇಶಕರು, ಭೂ ಮಾಪನ ಇಲಾಖೆ, ಜಿಲ್ಲಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಶ್ರೀ ಆರ್.ಎಸ್. ಮಂಜುನಾಥ್, ದ್ವಿತೀಯದರ್ಜೆ ಭೂಮಾಪಕರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಈ ಅಧಿಕಾರಿಗಳು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.62

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಮಮಇ 506 ಎಸ್‌ಜೆಡಿ 2007 (ಭಾ) ಬೆಂಗಳೂರು, ದಿನಾಂಕ: 12ನೇ ನವೆಂಬರ್ 2008.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 506 ಎಸ್‌ಜೆಡಿ 2007, ದಿ: 2–1–2008ರ ಕ್ರಮ ಸಂಖ್ಯೆ (5) ರಲ್ಲಿನ 2ನೇ ಕಲಂನಲ್ಲಿ "ಶ್ರೀ ಮ್ಯಾಥ್ಯೂ ಎ.ಬಿ.", ಎಂಬ ಪದಗಳ ಬದಲಿಗೆ "ಶ್ರಿ ಮ್ಯಾಥ್ಯೂ ಎ.ವಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.83

**ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಭೂಮಿಯನ್ನು ರಕ್ಷಿಸಲು ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪ್ರಾಧಿಕಾರಗಳನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ 26–9–2008ರಂದು ನಡೆದ ವಿಧಾನಸಭೆ ಭರವಸೆ ಸಮಿತಿ ಸಭೆಯಲ್ಲಿ ಕಂದಾಯ ಭೂಮಿಯ ಸಂರಕ್ಷಣೆಗಾಗಿ ಈ ಕೆಳಕಂಡಂತೆ ಕ್ರಮ ವಹಿಸಬೇಕೆಂದು ಸೂಚನೆ ನೀಡಲಾಗಿರುತ್ತದೆ.

> "ಸರ್ಕಾರಿ ಭೂಮಿಯನ್ನು ಒತ್ತುವರಿಯ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕಂದಾಯ ಸಚಿವರು ಸದರಿ ಪ್ರಾಧಿಕಾರಗಳನ್ನು ಶೀಘ್ರವಾಗಿ ರಚಿಸಲಾಗುತ್ತದೆ ಎಂದು ಭರವಸೆ ಕೊಟ್ಟಿದ್ದು, ಇಲ್ಲಿಯವರೆಗೂ ಪ್ರಾಧಿಕಾರವು ರಚನೆ ಆಗದೆ ಇರುವುದರಿಂದ ಒಂದು ತಿಂಗಳ ಒಳಗಾಗಿ ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪ್ರಾಧಿಕಾರಗಳು ರಚನೆ ಆಗಬೇಕು."

ಮೇಲಿನ ಭರವಸೆ ಸಮಿತಿಯ ಸೂಚನೆ ಪ್ರಕಾರ ಈ ಕೆಳಕಂಡಂತೆ ಕಂದಾಯ ಇಲಾಖೆಯ ಭೂಮಿಯ ಸಂರಕ್ಷಣೆಗಾಗಿ ಪ್ರಾಧಿಕಾರಗಳನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 82 ಎಲ್.ಜಿ.ಕ್ಯೂ. 99(ಪಿ1) ಬೆಂಗಳೂರು, ದಿನಾಂಕ: 13ನೇ ನವೆಂಬರ್ 2008.**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಪರಿಶೀಲಿಸಿದ ನಂತರ ಸರ್ಕಾರವು ಸರ್ಕಾರಿ ಭೂಮಿಗಳನ್ನು ಸಂರಕ್ಷಿಸಲು ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಪ್ರಾಧಿಕಾರಗಳನ್ನು ಈ ಕೆಳಕಂಡಂತೆ ರಚಿಸಿ ಆದೇಶ ಹೊರಡಿಸಲಾಗಿದೆ.

### ರಾಜ್ಯ ಮಟ್ಟದ ಪ್ರಾಧಿಕಾರ

| | | |
|---|---|---|
| 1 | ಮಾನ್ಯ ಕಂದಾಯ ಸಚಿವರು | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಉಪಾಧ್ಯಕ್ಷರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಮುಖ್ಯ ಇಲಾಖೆಗಳು (ಅರಣ್ಯ ಇಲಾಖೆ, ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಆರೋಗ್ಯ ಇಲಾಖೆ, ಶಿಕ್ಷಣ ಇಲಾಖೆ ಇತ್ಯಾದಿ) | ಸದಸ್ಯರು |
| 4 | ಎಲ್ಲಾ ಪ್ರಾದೇಶಿಕ ಆಯುಕ್ತರುಗಳು | ಸದಸ್ಯರು |
| 5 | ಆಯುಕ್ತರು, ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆ | ಸದಸ್ಯರು |
| 6 | ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು | ಸದಸ್ಯರು |
| 7 | ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ, | ಸದಸ್ಯರು |
| 8 | ವಿಶೇಷ ಜಿಲ್ಲಾಧಿಕಾರಿಗಳು, (ಜಾರಿದಳ) ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |
| 9 | ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, Task Force, ಬೆಂಗಳೂರು | ಸದಸ್ಯರು |
| 10 | ಸಂಬಂಧಿಸಿದ ತಹಶೀಲ್ದಾರರು, ಬೆಂಗಳೂರು (ನ) ಮತ್ತು (ಗ್ರಾ) ಜಿಲ್ಲೆಗಳು | ಸದಸ್ಯರು |

### ಜಿಲ್ಲಾ ಮಟ್ಟದ ಪ್ರಾಧಿಕಾರ

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಜಿಲ್ಲೆಯ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ | ಸದಸ್ಯರು |
| 3 | ಉಪ ವಿಭಾಗಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |
| 4 | ತಾಂತ್ರಿಕ ಸಹಾಯಕರು ಮತ್ತು ಪದನಿಮಿತ್ತ ಭೂ ದಾಖಲೆಗಳ ಉಪ ನಿರ್ದೇಶಕರು | ಸದಸ್ಯರು |
| 5 | ಜಿಲ್ಲೆಯ ಎಲ್ಲಾ ತಹಶೀಲ್ದಾರರು | ಸದಸ್ಯರು |

| | | |
|---|---|---|
| 6 | ಸರ್ಕಾರಿ ಜಮೀನನ್ನು ಪಡೆದುಕೊಂಡಿರುವ ಪ್ರಮುಖ ಇಲಾಖೆಗಳ ಪ್ರತಿನಿಧಿಗಳು (ಅರಣ್ಯ ಇಲಾಖೆ, ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಆರೋಗ್ಯ ಇಲಾಖೆ, ಶಿಕ್ಷಣ ಇಲಾಖೆ ಇತ್ಯಾದಿ) | ಸದಸ್ಯರು |

**ತಾಲ್ಲೂಕು ಮಟ್ಟದ ಪ್ರಾಧಿಕಾರ**

| | | |
|---|---|---|
| 1 | ತಹಶೀಲ್ದಾರರು | ಅಧ್ಯಕ್ಷರು |
| 2 | ತಾಲ್ಲೂಕು ಮಟ್ಟದಲ್ಲಿ ಸರ್ಕಾರಿ ಜಮೀನನ್ನು ಪಡೆದುಕೊಂಡಿರುವ ಪ್ರಮುಖ ಇಲಾಖೆಗಳ ಪ್ರತಿನಿಧಿಗಳು (ಅರಣ್ಯ ಇಲಾಖೆ, ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಆರೋಗ್ಯ ಇಲಾಖೆ, ಶಿಕ್ಷಣ ಇಲಾಖೆ ಇತ್ಯಾದಿ) | ಸದಸ್ಯರು |

ಪ್ರಾಧಿಕಾರಿಗಳು ಈ ಕೆಳಕಂಡ ಅಂಶಗಳ ಬಗ್ಗೆ ಕಾರ್ಯ ನಿರ್ವಹಿಸತಕ್ಕದ್ದು.

1 ಸರ್ಕಾರಿ ಭೂಮಿಯ ಒತ್ತುವರಿಯನ್ನು ಪತ್ತೆಹಚ್ಚುವುದು

2 ಸರ್ಕಾರಿ ಭೂಮಿಯನ್ನು ಒತ್ತುವರಿಯಿಂದ ತೆರವುಗೊಳಿಸಿ ತ್ರೈಮಾಸಿಕ ವರದಿಯನ್ನು ಸಲ್ಲಿಸುವುದು.

3 ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 192(ಎ) ರಡಿಯಲ್ಲಿ ಅಪರಾಧ ಪ್ರಕರಣಗಳನ್ನು ದಾಖಲು ಮಾಡುವುದು.

ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪ್ರಾಧಿಕಾರಗಳು ಜಿಲ್ಲಾಧಿಕಾರಿಗಳ ಮೂಲಕ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.63

**ಇ. ಈಶ್ವರ್ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ)

**ಕಾರ್ಮಿಕ ಸಚಿವಾಲಯ**

**ವಿಷಯ :** ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪ ಇಲ್ಲಿಗೆ ಮಂಜೂರು ಮಾಡಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸಾಗರಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ: ಕಾಇ 287 ಇಟಿಐ 2008(ಭಾಗ) ದಿನಾಂಕ 6–9–2008.
2. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ: ಮುಮಕಾ/3026/08, ದಿನಾಂಕ 6–10–2008.
3. ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಉತನಿ/ತರಬೇತಿ/ಯೋ–2/ವಿವ–04/2008–09, ದಿನಾಂಕ 17–10–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2008–09ನೇ ಸಾಲಿನಲ್ಲಿ 10 ಸ್ಥಳಗಳಲ್ಲಿ ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು. ಈ 10 ಸ್ಥಳಗಳ ಪೈಕಿ ಶಿರಾಳಕೊಪ್ಪ, ಶಿವಮೊಗ್ಗ ಜಿಲ್ಲೆ ಇಲ್ಲಿಗೆ ಹೊಸದಾಗಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿಯಲ್ಲಿ ಶಿರಾಳಕೊಪ್ಪ, ಶಿವಮೊಗ್ಗ ಜಿಲ್ಲೆ ಇಲ್ಲಿಗೆ ಬದಲಾಗಿ ಸಾಗರ, ಶಿವಮೊಗ್ಗ ಜಿಲ್ಲೆ ಇಲ್ಲಿಗೆ ಹೊಸ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಬದಲಾಯಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಮಾನ್ಯ ಮುಖ್ಯಮಂತ್ರಿಯವರು ನಿರ್ದೇಶಿಸಿರುವುದಾಗಿ ತಿಳಿಸುತ್ತಾ, ಈ ಬಗ್ಗೆ ಪರಿಷ್ಕೃತ ಆದೇಶ ಜಾರಿ ಮಾಡಲು ಕೋರಿರುತ್ತಾರೆ.

ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 287 ಇಟಿಐ 2008 ಬೆಂಗಳೂರು, ದಿನಾಂಕ: 8ನೇ ಡಿಸೆಂಬರ್ 2008.**

ಆದೇಶ ಸಂಖ್ಯೆ: ಕಾಇ 287 ಇಟಿಐ 2008 (ಭಾಗ) ದಿನಾಂಕ 6–9–2008ರಲ್ಲಿ ಶಿರಾಳಕೊಪ್ಪ, ಶಿವಮೊಗ್ಗ ಜಿಲ್ಲೆ, ಇಲ್ಲಿಗೆ ಮಂಜೂರು ಮಾಡಿರುವ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸಾಗರ, ಶಿವಮೊಗ್ಗ ಜಿಲ್ಲೆ, ಇಲ್ಲಿಗೆ ಸ್ಥಳಾಂತರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.84

**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳಿಗೆ ಭಾರತ ಸಂಚಾರ ನಿಗಮ ನಿಯಮಿತ, ಬೆಂಗಳೂರು ಇವರ ಸಿ.ಯು.ಜಿ. ನೆಟ್‌ವರ್ಕ್ ಯೋಜನೆಯಡಿಯಲ್ಲಿ ಕೆಲವು ಕಾರ್ಯಕ್ರಮಾಧಿಕಾರಿಗಳ ಸಿಮ್ ಕಾರ್ಡ್‌ಗಳ ನಿಗಧಿತ ದರಗಳನ್ನು ನಿರ್ಬಂಧಿತವಿಲ್ಲದಂತೆ ಅನಿಯಮಿತ ವೆಚ್ಚಕ್ಕೆ ತಿದ್ದುಪಡಿಗಾಗಿ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: HFW/KHSDRP/Sect-59/2007, ಬೆಂಗಳೂರು ದಿನಾಂಕ 18–12–2007ರ ಮಾರ್ಪಾಡು.

**ಪ್ರಸ್ತಾವನೆ :**

ಸರ್ಕಾರಿ ಆದೇಶ HFW/KHSDRP/Sect-59/2007, ಬೆಂಗಳೂರು ದಿನಾಂಕ 18–12–2007ಗಳಲ್ಲಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ ವ್ಯಾಪ್ತಿಯಲ್ಲಿ ಹಾಗೂ ರಾಷ್ಟ್ರೀಯ ಗ್ರಾ.ಆ. ಅಭಿಯಾನದ ವತಿಯಿಂದ ರಾಷ್ಟ್ರೀಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಕಾರ್ಯಕ್ರಮಾಧಿಕಾರಿಗಳು ತಾಲ್ಲೂಕುವಾರು, ಜಿಲ್ಲಾವಾರು ಕಾರ್ಯನುಷ್ಠಾನದ ಬಗ್ಗೆ ದೂರವಾಣಿ ಮೂಲಕ ಒಳ ಮತ್ತು ಹೊರ ಕರೆಗಳನ್ನು ಮಾಡಬೇಕಾಗಿದ್ದು, ಹಾಲಿ ನಿಗಧಿಪಡಿಸಿದ್ದ ದರ ಸಿಯುಜಿ ಪ್ಲ್ಯಾನ್ ರೂ. 525 ರಿಂದ 825ಕ್ಕೆ ನಿಗದಿ ಪಡಿಸಿರುವ ನಿರ್ಬಂಧಿತ ನಿಗದಿಯನ್ನು ಅನಿಯಮಿತ ದರಕ್ಕೆ (ಅನ್‌ಲಿಮಿಟೆಡ್) ನಿಗಧಿಗೊಳಿಸಬೇಕಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಮಾರ್ಪಾಡು ಆದೇಶಕ್ಕಾಗಿ ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ ಪ್ರಸ್ತುತ ಸಿಮ್‌ಕಾರ್ಡ್‌ಗಳ ನಿಗಧಿತ ದರವನ್ನು ಅನಿಯಮಿತ (ಅನ್‌ಲಿಮಿಟೆಡ್) ದರಕ್ಕೆ ನಿಗಧಿಗೊಳಿಸಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: HFW/KHSDRP/02/2007-08, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳನ್ನು ಗಮನಿಸಿ, ದಿನಾಂಕ 1–10–2008 ರಿಂದಲೇ ಜಾರಿಗೆ ಬರುವಂತೆ, ಆರೋಗ್ಯ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿಗಳು, ಆರ್.ಸಿ.ಎಚ್. ಅಧಿಕಾರಿಗಳು ಹಾಗೂ ಅಧೀಕ್ಷಕ ಅಭಿಯಂತರರು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ ಇವರುಗಳಿಗೆ ಅನುಬಂಧದಲ್ಲಿನ ಅಧಿಕಾರಿ/ಕಾರ್ಯಕ್ರಮಾಧಿಕಾರಿಗಳ ವಿವರದ ಪಟ್ಟಿಯಂತೆ ಹಾಲಿ ಇರುವ ಸಿಮ್ ಕಾರ್ಡ್‌ನ ಸಿಯುಜಿ ಯೋಜನೆ 525.00 ರಿಂದ 825.00 ಕ್ಕೆ ಪುನರ್ ಪರಿಷ್ಕರಿಸಿದ ಆದೇಶ ದಿನಾಂಕ 7–8–2008ಕ್ಕೆ ಅನಿಯಮಿತ ದರ (ಅನ್‌ಲಿಮಿಟೆಡ್) ಮಾರ್ಪಾಡು ಮಾಡಿ ತಿದ್ದುಪಡಿ ಆದೇಶ ನೀಡಲಾಗಿದೆ.

| ಕ್ರಮ ಸಂಖ್ಯೆ | ಪದನಾಮ | ಹಿಂದೆ ನಿಗಧಿಪಡಿಸಿದ ಸಿಯುಜಿ ಯೋಜನೆ | ಪರಿಷ್ಕೃತ ದರ | ನಿಗಧಿಪಡಿಸಿರುವ ಒಟ್ಟು ಮೊತ್ತ |
|---|---|---|---|---|
| 1 | ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು | 525.00 | 725.00 | Unlimited |
| 2 | ಎಲ್ಲಾ ಜಿಲ್ಲಾ ಯೋಜನಾ ನಿರ್ವಹಣಾಧಿಕಾರಿಗಳು, ಕೆಹೆಚ್‌ಎಸ್‌ಡಿಆರ್‌ಪಿ | 525.00 | 725.00 | Unlimited |

| ಕ್ರಮ ಸಂಖ್ಯೆ | ಪದನಾಮ | ಹಿಂದೆ ನಿಗಧಿಪಡಿಸಿದ ಸಿಯುಜಿ ಯೋಜನೆ | ಪರಿಷ್ಕೃತ ದರ | ನಿಗಧಿಪಡಿಸಿರುವ ಒಟ್ಟು ಮೊತ್ತ |
|---|---|---|---|---|
| 3 | ಎಲ್ಲಾ ಆರ್‌ಸಿಹೆಚ್ ಅಧಿಕಾರಿಗಳು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ | 525.00 | 725.00 | Unlimited |
| 4 | ಅಧೀಕ್ಷಕ ಅಭಿಯಂತರರು, ಕೆಎಚ್‌ಎಸ್‌ಡಿಆರ್‌ಪಿ | 525.00 | 725.00 | Unlimited |

ಈ ಬಿಲ್ಲಿನಲ್ಲಿ ಬರುವ ಇತರೆ ಸರ್‌ಚಾರ್ಜ್/ಸೆಸ್ ಇತ್ಯಾದಿ ವೆಚ್ಚ ಸೇರಿಸಿ ಒಟ್ಟು ಬಿಲ್ಲಿನ ವೆಚ್ಚವನ್ನು ಕೆಹೆಚ್‌ಎಸ್‌ಡಿಆರ್‌ಪಿ ಯ ದೂರವಾಣಿ ಲೆಕ್ಕಶೀರ್ಷಿಕೆ 2210–06–800–81 (ಯೋ) 052 (ದೂರವಾಣಿ ವೆಚ್ಚ) ಅಡಿಯಲ್ಲಿ ಭರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.86

**ಸುಷಮಾ ಗೋಡಬೋಲೆ**

ಸರ್ಕಾರದ ಉಪ ಕಾರ್ಯದರ್ಶಿ,
ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ನಂ. ಒಇ 473 ಪಿಪಿಇ 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2008.**

ಸರ್ಕಾರದ ಆದೇಶ ನಂ. ಒಇ 257 ಪಿಪಿಇ 2008, ದಿನಾಂಕ 19–9–2008ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಹಲವು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರುಗಳ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಕುರಿತ ಆದೇಶ ಭಾಗದ ಕ್ರ.ಸಂ. 9ರ ಅಂಕಣ 2ರಲ್ಲಿ "(ನಿಯೋಜನೆ ಮೇರೆಗೆ)" ಎಂಬ ಪದವನ್ನು ಬಿಟ್ಟು ಓದಿಕೊಳ್ಳತಕ್ಕದ್ದು ಮತ್ತು ಅಂಕಣ 4ರಲ್ಲಿ "29–7–2005"ಕ್ಕೆ ಬದಲಾಗಿ "29–7–2006" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.90

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**HEALTH AND FAMILY WELFARE SECRETARIAT**

**CORRIGENDUM**

**No. HFW 125 IMM 2008, Bangalore, Dated 16th December 2008**

In Notification No. HFW 125 IMM 2008, dated 4-10-2008 the word appearing as "Government Analysis" shall be read as "Government Analysts".

By order and in the name of the Governor of Karnataka,

PR. 89

**N. MAHALAKSHMAMMA**

Under Secretary to Government,
Health and Family Welfare Department.

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ನಂ: ಒಇ 471 ಪಿಪಿಇ 2008, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2008.**

ದಿನಾಂಕ: 2–9–2008ರ ಸರ್ಕಾರದ ಆದೇಶ ನಂ. ಒಇ 313 ಪಿಪಿಇ 2008ರ ಆದೇಶ ಭಾಗದ ಕ್ರ.ಸಂ. (6)ರಲ್ಲಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಜೆಎಂಎಫ್‌ಸಿ ನ್ಯಾಯಾಲಯ, ಕಡೂರು" ಎಂದು ನಮೂದಿಸಿರುವುದನ್ನು "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿವಿಲ್ ಜಡ್ಜ್ ಹಿರಿಯ ವಿಭಾಗ

ನ್ಯಾಯಾಲಯ, ಕಡೂರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ 2–9–2008ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.92

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸಾ ಮತ್ತು ಅಭಿಯೋಗಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ ಆದೇಶ

**ಸಂ: ಗ್ರಾಅಪ 18 ಎಸ್‌ಜಿವೈ (ಇನ್‌ಪ್ರಾ) 05, ಬೆಂಗಳೂರು, ದಿನಾಂಕ 5ನೇ ಡಿಸೆಂಬರ್ 2008**

**ವಿಷಯ :** ಭೈಫ್ ಸಂಸ್ಥೆಗಳ ಸೇವಾ ವೆಚ್ಚವನ್ನು ಮುಂದುವರೆಸಿರುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶದ ಸಂ: ಗ್ರಾಅಪ/18/ಎಸ್‌ಇಪಿ(ಇತರೆ) 2005, ದಿನಾಂಕ 20–8–2008.
2. ಸರ್ಕಾರದ ಇದೇ ಸಮಸಂಖ್ಯೆಯ ತಿದ್ದುಪಡಿ ಆದೇಶ ದಿ: 20–10–08.
3. ಮುಖ್ಯ ಕಾರ್ಯಕ್ರಮ ಸಂಯೋಜಕರು ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತಿಪಟೂರು ರವರ ಪತ್ರದ ಸಂಖ್ಯೆ: BOK/7PR/SKW/020/063 dt: 18-11-2008.

ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಬೈಫ್ ಸಂಸ್ಥೆ ವತಿಯಿಂದ ನಡೆಸುತ್ತಿರುವ ಕೃತಕ ಗರ್ಭಧಾರಣಾ ಕೇಂದ್ರಗಳ ಸೇವಾ ವೆಚ್ಚವನ್ನು ಪಾವತಿಸಲು ಹಾಗೂ ಸದರಿ ಬೈಫ್ ಕೇಂದ್ರಗಳನ್ನು ದಿನಾಂಕ 31–3–2008 ರವರೆಗೆ ಮುಂದುವರೆಸಲು ಆದೇಶ ನೀಡಲಾಗಿತ್ತು. ಸದರಿ ಆದೇಶದ ಅನುಬಂಧ (1)ರಲ್ಲಿನ ಕ್ರಮ ಸಂಖ್ಯೆ 62 ರಲ್ಲಿರತಕ್ಕ ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಗರಗನಹಳ್ಳಿ ಗೇಟ್ ಗ್ರಾಮದ ಬೈಫ್ ಕೇಂದ್ರವನ್ನು ಇದೇ ತಾಲ್ಲೂಕಿನ ಸೋಮನಹಳ್ಳಿ ಗ್ರಾಮಕ್ಕೆ ವರ್ಗಾಯಿಸಿರುವುದರಿಂದ ಉಲ್ಲೇಖ (1)ರಲ್ಲಿನ ಆದೇಶಕ್ಕೆ ತಿದ್ದುಪಡಿ ಆದೇಶ ಹೊರಡಿಸಲು ಉಲ್ಲೇಖ (3)ರ ಪತ್ರದಲ್ಲಿ ಮುಖ್ಯ ಕಾರ್ಯಕ್ರಮ ಸಂಯೋಜಕರು ಬೈಫ್ ಗ್ರಾಮೀಣಾಭಿವೃದ್ಧಿ ಸಂಸ್ಥೆ, ತಿಪಟೂರು ರವರು ಕೋರಿರುತ್ತಾರೆ.

ಅಂತೆಯೇ ಉಲ್ಲೇಖ (1)ರ ಆದೇಶದಲ್ಲಿನ ಅನುಬಂಧ (1)ರಲ್ಲಿ ಕ್ರಮ ಸಂಖ್ಯೆ 62ರಲ್ಲಿ ನಮೂದಿಸಿರುವ ಗರಗನಹಳ್ಳಿ ಗೇಟ್ ಬೈಫ್ ಸೇವಾ ಕೇಂದ್ರ ಎಂತಿರುವುದನ್ನು ಸೋಮನಹಳ್ಳಿ ಎಂದು ತಿದ್ದುಕೊಳ್ಳಲು ಆದೇಶಿಸಿದೆ. ಹಾಗೂ ಈ ಕೇಂದ್ರದ ಹೆಸರನ್ನು ನಮೂದಿಸಿ ಜಿಲ್ಲಾ ಪಂಚಾಯತ್ ಜೊತೆ ಕೇಂದ್ರದ ಮುಂದುವರಿಕೆಗೆ ಕರಾರು ಪತ್ರ ಮಾಡಿಕೊಳ್ಳಲು ಬೈಫ್ ಸಂಸ್ಥೆಗೆ ಆದೇಶಿಸಿದೆ.

**ಎ.ಎಸ್. ಶ್ರೀಕಾಂತ್**

ಪಿ.ಆರ್.125

ಸರ್ಕಾರದ ಕಾರ್ಯದರ್ಶಿ (ಪಂ.ರಾಜ್),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 5 ಹೆಚ್‌ಹೆಚ್‌ಎಲ್ 2008, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

2009ನೇ ಸಾಲಿಗೆ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್ ಅಡಿಯಲ್ಲಿ ಘೋಷಿಸಿದ ರಜೆಗಳ ಅಧಿಸೂಚನೆ–1 ಸಂಖ್ಯೆ ಸಿಆಸುಇ 5 ಹೆಚ್‌ಹೆಚ್‌ಎಲ್ 2008, ದಿನಾಂಕ 2–12–2008ರ ಟಿಪ್ಪಣಿ 2ರಲ್ಲಿ "ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಜೂನ್ 30 ಮತ್ತು ಡಿಸೆಂಬರ್ 31 ವಾರ್ಷಿಕ ಮತ್ತು ಅರ್ಧ ವಾರ್ಷಿಕ ಲೆಕ್ಕ ಪತ್ರ ಮುಕ್ತಾಯದ ದಿನಗಳಾಗಿರುತ್ತವೆ" ಎಂಬುದರ ಬದಲಾಗಿ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

**"ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಜುಲೈ 1 ಲೆಕ್ಕ ಪತ್ರ ಮುಕ್ತಾಯ ದಿನವಾಗಿರುತ್ತದೆ. ಡಿಸೆಂಬರ್ 31ರಂದು ಕಾರ್ಯನಿರ್ವಹಿಸುತ್ತದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.134

**ಕೆ.ವಿ. ರಾಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ರಾಜ್ಯ ಶಿಷ್ಟಾಚಾರ–1)

**ವಸತಿ ಸಚಿವಾಲಯ**

**ವಿಷಯ :** 2008–09ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು ದಿನಾಂಕ 23–6–2008.
2. ಸರ್ಕಾರ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು ದಿನಾಂಕ 25–9–2008.
3. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಲೆಪಶಾ/ಅನುಧಾನ: 2008–2009/687, ದಿನಾಂಕ 18–11–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 784.735 ಲಕ್ಷಗಳು ಒಟ್ಟು ರೂ. 847.235 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2)ರಲ್ಲಿ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 775.385 ಲಕ್ಷಗಳು ಒಟ್ಟು ರೂ. 837.885 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ರವರ ಪತ್ರದಲ್ಲಿ 2008–2009ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನದಲ್ಲಿ ಸಿಬ್ಬಂದಿ ವೆಚ್ಚಕ್ಕೆ ಕ್ರಮವಾಗಿ (ಯೋಜನೆ ಮತ್ತು ಯೋಜನೇತರಡಿ) ಒಟ್ಟು 128.125 ಲಕ್ಷಗಳು, ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ. 715.54 ಲಕ್ಷಗಳು ಒಟ್ಟು ಯೊಜನೆಯಡಿ ರೂ. 62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 781.165 ಲಕ್ಷಗಳು ಒಟ್ಟು ರೂ. 843.665 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರುತ್ತಾ, ಲೆಕ್ಕ ಶೀರ್ಷಿಕೆ 2217–04–191–2–02 ಕೊಳಚೆ ಸುಧಾರಣೆ ಮತ್ತು ಲೆಕ್ಕ ಶೀರ್ಷಿಕೆ 2217–04–191–2–03 ಸಮಗ್ರ ವಸತಿ ಮತ್ತು ಕೊಳಚೆ ಸುಧಾರಣೆ (IHSDP) ಸಹಾಯದನಗಳಡಿಯಲ್ಲಿ ಬಿಡುಗಡೆ ಮಾಡಬೇಕಾದ ಮೊತ್ತವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2008.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2008–09ನೇ ಸಾಲಿಗೆ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ) ಗಾಗಿ ರೂ. 843.66449 ಲಕ್ಷ (ಎಂಟುನೂರಾ ನಲವತ್ತಮೂರು ಲಕ್ಷದ ಮತ್ತು ಅರವತ್ತಾರು ಸಾವಿರದ ನಾಲ್ಕನೂರ ನಲವತ್ತೊಂಬತ್ತು ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೂರನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1 | ಸಿಬ್ಬಂದಿ ವೆಚ್ಚ 2217–04–191–2–01 | 62.50 | 65.625 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ 4217–60–800–3–01 | – | 715.53949 |
| | **ಒಟ್ಟು** | **62.50** | **781.16449** |
| | **ಒಟ್ಟು ಮೊತ್ತ (ಯೋ + ಯೋಜನೇತರ)** | **843.66449** | |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.

3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ಧೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಎಫ್‌ಡಿ 787 ವೆಚ್ಚ–9/2008, ದಿನಾಂಕ 12–12–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.133

**ಜಿ.ಆರ್. ನಾಗರಾಜ**
ಪೀಠಾಧಿಕಾರಿ–4, ವಸತಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆಗಳಲ್ಲಿ ವರ್ಷಾಂತ್ಯದ ಬಿಲ್ಲುಗಳನ್ನು ಮಾರ್ಚ್ 31ರಂದೇ ತೀರ್ಣಗೊಳಿಸಿ ಲೆಕ್ಕವನ್ನು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಇ 26 ಬಿಪಿಇ 2007, ದಿನಾಂಕ 17–12–2007.

**ಪ್ರಸ್ತಾವನೆ :**

2007–08ನೇ ಸಾಲಿನ ವರ್ಷಾಂತ್ಯದ ಬಿಲ್ಲುಗಳನ್ನು ಖಜಾನೆಗಳಲ್ಲಿ ಸ್ವೀಕರಿಸಿ ತೀರ್ಣಗೊಳಿಸಿ ದಿನಾಂಕ 31–3–2008 ರಂದೇ 2007–08ನೇ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸಲು ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕಾಲಮಿತಿ ನಿಗಧಿಪಡಿಸಿ ವೇಳಾಪಟ್ಟಿಯನ್ನು ನಿಗಧಿಪಡಿಸಲಾಗಿತ್ತು. ಸದರಿ ವೇಳಾಪಟ್ಟಿಯಂತೆ ಇಲಾಖಾ ಅಧಿಕಾರಿಗಳು ಹಾಗೂ ಖಜಾನಾಧಿಕಾರಿಗಳು ಸೂಕ್ತ ಕ್ರಮ ಕೈಗೊಂಡಿದ್ದು ಯೋಜನೆಯನ್ನು ಯಶಸ್ವಿಯಾಗಿ ನಿರ್ವಹಿಸಲಾಗಿದೆ.

2008–09ನೇ ಸಾಲಿನ ವರ್ಷಾಂತ್ಯದ ಬಿಲ್ಲುಗಳನ್ನು ಸಹ ಖಜಾನೆಗಳಲ್ಲಿ ಸ್ವೀಕರಿಸಿ ತೀರ್ಣಗೊಳಿಸಿ ದಿನಾಂಕ 31–3–2009 ರಂದೇ 2008–09ನೇ ಸಾಲಿನ ಲೆಕ್ಕಗಳನ್ನು ಮುಕ್ತಾಯಗೊಳಿಸಲು ಸೂಕ್ತ ವೇಳಾಪಟ್ಟಿಯನ್ನು ನೀಡಿ ಸಾಕಷ್ಟು ಮುಂಚಿತವಾಗಿ ಆದೇಶವನ್ನು ಹೊರಡಿಸುವುದು ಅವಶ್ಯವಿದೆಯೆಂದು ಖಜಾನ ನಿರ್ದೇಶಕರು ಸರ್ಕಾರವನ್ನು ಕೋರಿದ್ದಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 19 ಬಿಪಿಇ 2008, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2008.**

1. EAP, ಕೇಂದ್ರ ಪುರಸ್ಕೃತ ಹಾಗೂ ಕೇಂದ್ರ ಯೋಜನೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಅನುದಾನ ಬಿಡುಗಡೆ ಆದೇಶಗಳನ್ನು ದಿನಾಂಕ 14–2–2009 ರೊಳಗೆ ಸಂಬಂಧಿಸಿದ ಇಲಾಖಾಧಿಕಾರಿಗಳು ಹೊರಡಿಸತಕ್ಕದ್ದು. ಈ ಸಂಬಂಧ ಅವರ ಅಧೀನದ ನಿಯಂತ್ರಣಾಧಿಕಾರಿಗಳು ಅಪ್‌ಲೋಡಿಂಗ್ ಕಾರ್ಯವನ್ನು ದಿನಾಂಕ 14–3–2009 ರೊಳಗೆ ಮುಕ್ತಾಯಗೊಳಿಸಬೇಕು.
2. ದಿನಾಂಕ 31–1–2009ರ ಹಾಗೂ ಅದಕ್ಕೂ ಮುಂಚಿತ ಅವಧಿಯ ಎಲ್ಲಾ ಪ್ರಯಾಣದ ಬಿಲ್ಲುಗಳನ್ನು ದಿನಾಂಕ 28–2–2009ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
3. ದಿನಾಂಕ 31–1–2009ರ ಹಾಗೂ ಅದಕ್ಕೂ ಮುಂಚಿತ ಅವಧಿಯಲ್ಲಿ ಭರಿಸಿದ ಎಲ್ಲಾ ಸಾದಿಲ್ವಾರು ಬಿಲ್ಲುಗಳನ್ನು ದಿನಾಂಕ 28–2–2009ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
4. ದಿನಾಂಕ 1–2–2009 ಹಾಗೂ ಅದರ ನಂತರ ಭರಿಸಿದ ವೆಚ್ಚಗಳಿಗೆ ಸಂಬಂಧಿಸಿದ ಎಲ್ಲಾ ಸಾದಿಲ್ವಾರು/ ಪ್ರಯಾಣ ಭತ್ಯೆ ಬಿಲ್ಲುಗಳನ್ನು ದಿನಾಂಕ 14–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
5. ವಿದ್ಯುಚ್ಛಕ್ತಿ, ದೂರವಾಣಿ ಹಾಗೂ ಕಟ್ಟಡ ಬಾಡಿಗೆಗೆ ಸಂಬಂಧಿಸಿದ ಬಿಲ್ಲುಗಳನ್ನು ದಿ: 25–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
6. ಎಲ್ಲಾ ಸಂಕ್ಷಿಪ್ತ ಸಾದಿಲ್ವಾರು ಬಿಲ್ಲುಗಳನ್ನು ದಿನಾಂಕ 25–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
7. ಮಾರ್ಚ್ 2009ರೊಳಗೆ ಪಾವತಿಸಲ್ಪಡುವ ಅನುದಾನಿತ ವೇತನ ಬಿಲ್ಲುಗಳನ್ನು ದಿನಾಂಕ 25–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು. ಇತರೇ ಅನುದಾನಿತ ಬಿಲ್ಲುಗಳನ್ನು ದಿ: 14–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.

8. ಏಪ್ರಿಲ್‌ನಲ್ಲಿ ಪಾವತಿಸಲಾಗುವ ಎಲ್ಲಾ ವೇತನ ಬಿಲ್ಲುಗಳನ್ನು ದಿನಾಂಕ 16–3–2009 ರಿಂದ 20–3–2009 ರೊಳಗೆ ಅಥವಾ 2–4–2009ರ ನಂತರ ಖಜಾನೆಗಳಿಗೆ ಸಲ್ಲಿಸತಕ್ಕದ್ದು. ಈ ಬಿಲ್ಲುಗಳನ್ನು ದಿನಾಂಕ 2–4–2009ರ ನಂತರವೇ ಗಣಕ ಯಂತ್ರದಲ್ಲಿ ಸಂಸ್ಕರಿಸಲಾಗುವುದು.
9. ಇಲಾಖಾಧಿಕಾರಿಗಳು ಹಾಗೂ ಸಚಿವಾಲಯದ ಆಡಳಿತ ಇಲಾಖೆಗಳು ಅನುದಾನದ ಪುನರ್ವಿನಿಯೋಗ (Re-appropriation)ದ ಕಾರ್ಯವನ್ನು ದಿ: 10–3–2009ರೊಳಗೆ ಮುಕ್ತಾಯಗೊಳಿಸಬೇಕು.
10. EAP, ಕೇಂದ್ರ ಪುರಸ್ಕೃತ ಹಾಗೂ ಕೇಂದ್ರ ಯೋಜನೆ ಬಿಲ್ಲುಗಳನ್ನು ಆಗಿಂದಾಗ್ಗೆ ಮತ್ತು ದಿನಾಂಕ 31–3–2009 ರೊಳಗೆ ಖಜಾನೆಗಳಿಗೆ ಸಲ್ಲಿಸತಕ್ಕದ್ದು.
11. ದಿ: 31–3–2009ರ ಅಪರಾಹ್ನ 2.30ರ ನಂತರ ಯಾವುದೇ ಬಿಲ್ಲುಗಳನ್ನು ಖಜಾನೆಗೆ ಸಲ್ಲಿಸುವುದನ್ನು ನಿರ್ಬಂಧಿಸಲಾಗಿದೆ.
12. ಎಲ್ಲಾ ಖಜಾನೆಗಳಲ್ಲಿ ಲೆಕ್ಕಗಳನ್ನು ಅಂತಿಮಗೊಳಿಸಲು ಅನುಕೂಲವಾಗುವಂತೆ ದಿನಾಂಕ 1–4–2009ನ್ನು ವ್ಯವಹಾರ ರಹಿತ ದಿನವನ್ನಾಗಿ ಘೋಷಿಸಲಾಗಿದೆ.
13. ಖಜಾನೆಗಳು ಮಾರ್ಚ್ 2009ರ ಲೆಕ್ಕಗಳನ್ನು 31ನೇ ಮಾರ್ಚ್ 2009ರ ನಂತರವೂ ತೆರೆದಿರಕೂಡದೆಂದು ಸೂಚಿಸಲಾಗಿದೆ.
14. ಸರ್ಕಾರಕ್ಕೆ 2008–09ರ ತಾತ್ಕಾಲಿಕ ಲೆಕ್ಕಗಳು ಮೇ 2009ರ 10ನೇ ತಾರೀಖಿನ ಒಳಗೆ ದೊರೆಯಲು ಅನುಕೂಲ ಆಗುವಂತೆ ಖಜಾನೆಗಳು ಮಾರ್ಚ್ 2009ರ ಲೆಕ್ಕಗಳನ್ನು ಮಹಾಲೇಖಪಾಲರು(ಎ ಮತ್ತು ಇ), ಕರ್ನಾಟಕ ಇವರಿಗೆ ಕಳುಹಿಸಲು ವ್ಯವಸ್ಥೆ ಮಾಡತಕ್ಕದ್ದು.
15. ಇಲಾಖಾ ಮುಖ್ಯಸ್ಥರು ಮತ್ತು ಅವರುಗಳ ಹಣ ಪಡೆಯುವ ಮತ್ತು ಬಟವಾಡೆ ಮಾಡುವ ಅಧಿಕಾರಿಗಳು ಈ ಆದೇಶದಲ್ಲಿ ತಿಳಿಸಿರುವ ವೇಳಾ ಪಟ್ಟಿಯಂತೆ ಕ್ರಮ ಕೈಗೊಳ್ಳತಕ್ಕದ್ದು ಮತ್ತು ಆರ್ಥಿಕ ಮಿತವ್ಯಯ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
16. ಸರ್ಕಾರದ ಆದೇಶ ಸಂಖ್ಯೆ: ಆಇ 2 ಟಿಎಫ್‌ಸಿ 2004, ದಿನಾಂಕ 9–9–2004ರಲ್ಲಿ ತಿಳಿಸಿರುವ ಸೂಚನೆಗಳನ್ನು ಸಹ ಗಮನದಲ್ಲಿಟ್ಟುಕೊಂಡು ಮೇಲೆ ಹೇಳಿರುವ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆಯವ್ಯಯದಲ್ಲಿ ನಿಗಧಿ ಪಡಿಸಿರುವ ಮೊತ್ತವನ್ನು ದಿನಾಂಕ 31–3–2009ರೊಳಗೆ ವೆಚ್ಚ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.39

**ಅಜಯ್ ಸೇಠ್**
ಸರ್ಕಾರದ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ವಾಕೈ 149 ಕೈಸೇವಿ 2008, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2008.**

ಸರ್ಕಾರದ ಆದೇಶ ಸಂಖ್ಯೆ: ವಾಕೈ 7 ಕೈಸೇವಿ 97, ದಿ: 26–12–1997ರಲ್ಲಿ ಶ್ರೀ ಕೆ. ನಾಗಭೂಷಣ್, ನಿವೃತ್ತ ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ಇಲಾಖೆಯಲ್ಲಿ ನೇಮಕಗೊಂಡಿದ್ದ ಮೆಕ್ಯಾನಿಕ್ ಹುದ್ದೆಯನ್ನು ಜಿಲ್ಲಾ ನೇಯ್ಗೆ ಪರಿವೀಕ್ಷಕರ ಹುದ್ದೆಗೆ ವರ್ಗ ಬದಲಿಸಿ, ದಿ; 1–12–1976ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆದೇಶಿಸಲಾಗಿದ್ದು, ಈ ಎರಡು ಹುದ್ದೆಗಳ ವರ್ಗ ಬದಲಾವಣೆಯ ದಿನಾಂಕವನ್ನು 1–12–1976ರ ಬದಲಾಗಿ ದಿ: 28–12–1970 ಎಂದು ಪರಿಷ್ಕರಿಸಿ ಭಾಗಶಃ ಮಾರ್ಪಡಿಸಲಾಗಿದೆ. ಈ ತಿದ್ದುಪಡಿಯಿಂದ ಅವರಿಗೆ ಯಾವುದೇ ಆರ್ಥಿಕ ಸೌಲಭ್ಯ ಒದಗುವುದಿಲ್ಲ. ಕೇವಲ ಸೇವಾ ಹಿರಿತನ ವಿಷಯಕ್ಕೆ ಸಂಬಂಧಿಸಿದಂತೆ ಮಾತ್ರ ಸದರಿ ಬದಲಾವಣೆ ಅನ್ವಯಿಸುವುದು ಎಂಬ ಷರತ್ತಿಗೊಳಪಡಿಸಿ ದಿ: 26–12–1997ರ ಸರ್ಕಾರಿ ಆದೇಶಕ್ಕೆ ತಿದ್ದುಪಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.37

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ವಸತಿ ಸಚಿವಾಲಯ**

**ವಿಷಯ :** ಬೆಳಗಾಂ ಜಿಲ್ಲೆ ಖಾನಾಪುರ ತಾಲ್ಲೂಕು, ಖಾನಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ/42/ಹೆಚ್‌ಎಂ/1999, ದಿನಾಂಕ 10-5-2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೆಳಗಾಂ ಜಿಲ್ಲೆ ಖಾನಾಪುರ ತಾಲ್ಲೂಕು, ಖಾನಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/18/ಹೆಚ್‌ಎಎಸ್/2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಬೆಳಗಾಂ ಜಿಲ್ಲೆ ಖಾನಾಪುರ ತಾಲ್ಲೂಕು, ಖಾನಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಬಲರಾಮ ಕೃಷ್ಣ ಸಾವಂತ, ಸ್ಟೇಷನ್ ರಸ್ತೆ, ಖಾನಾಪುರ | ಸದಸ್ಯರು |
| 2 | ಅಡ್ವೋಕೇಟ್ ರೇಣುಕ ಸೊಂಟಾಕೆ, ಷಾಹುನಗರ, ಸ್ಟೇಷನ್ ರಸ್ತೆ, ಖಾನಾಪುರ | ಸದಸ್ಯರು |
| 3 | ಶ್ರೀ ಯಶವಂತ ಬಾಲು ಗಾವಡೆ, ಕೆಮಚಾಪುರ ಗಲ್ಲಿ, ಖಾನಾಪುರ | ಸದಸ್ಯರು |
| 4 | ಶ್ರೀ ಮಾಲಿಕ್ ನಾಸಿರ್ ಅಹಮದ್ ಮುಲ್ಲಾ, ರವಿವಾರ ಪೇಟೆ, ಖಾನಪುರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.29

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2, ವಸತಿ ಇಲಾಖೆ

**ವಿಷಯ :** ಬಳ್ಳಾರಿ ಜಿಲ್ಲೆ, ಶಿರಗುಪ್ಪ ತಾಲ್ಲೂಕು, ತೆಕ್ಕಲಕೋಟೆ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ/42/ಹೆಚ್‌ಎಂ/1999, ದಿನಾಂಕ 10-5-2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಅದರಂತೆ ಬಳ್ಳಾರಿ ಜಿಲ್ಲೆ, ಶಿರಗುಪ್ಪ ತಾಲ್ಲೂಕು, ತೆಕ್ಕಲಕೋಟೆ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/18/ಹೆಚ್‌ಎಎಸ್/2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಬಳ್ಳಾರಿ ಜಿಲ್ಲೆ, ಶಿರಗುಪ್ಪ ತಾಲ್ಲೂಕು, ತೆಕ್ಕಲಕೋಟೆ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಡಿ. ವೆಂಕಟೇಶ್, ಬಿನ್ ಮೇಸ್ತರೀ ಮಲ್ಲಪ್ಪ, ತೆಕ್ಕಲಕೋಟೆ ಅಂಚೆ | ಸದಸ್ಯರು |
| 2 | ಶ್ರೀ ಹೆಚ್. ಮಹಬೂಬ್ ಸಾಬ್ ಬಿನ್ ಹೆಚ್. ನಬೀ ರಸೂಲ್ ಸಾಬ್ | ಸದಸ್ಯರು |
| 3 | ಶ್ರೀ ಜಡೇ ಶಿವರುದ್ರಪ್ಪ, ಬಿನ್ ಮರೇಗೌಡ, ತೆಕ್ಕಲಕೋಟೆ ಅಂಚೆ | ಸದಸ್ಯರು |
| 4 | ಶ್ರೀಮತಿ ಮಾಂಕಾಳಮ್ಮ, ಗಂಡ ಶೇಖಪ್ಪ, 17ನೇ ವಾರ್ಡ್ ತೆಕ್ಕಲಕೋಟೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.30

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2, ವಸತಿ ಇಲಾಖೆ

**ವಿಷಯ :** ಬೀದರ ಜಿಲ್ಲೆ, ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ/42/ಹೆಚ್‌ಎಎಂ/1999, ದಿನಾಂಕ 10–5–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೀದರ ಜಿಲ್ಲೆ ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/18/ಹೆಚ್‌ಎಎಸ್/2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಬೀದರ ಜಿಲ್ಲೆ ಬಸವಕಲ್ಯಾಣ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀಮತಿ ಶೋಭಾವತಿ ಅನೀಲಕುಮಾರ ತೆಲಂಗ, ಬನಶಂಕರಿ ಗಲ್ಲಿ, ಬಸವಕಲ್ಯಾಣ | ಸದಸ್ಯರು |
| 2 | ಶ್ರೀ ಶಂಕರ ಕಾಶಪ್ಪ ಬಿರಾದರ, ಶಹಾಪೂರ ಗಲ್ಲಿ, ಬಸವಕಲ್ಯಾಣ | ಸದಸ್ಯರು |
| 3 | ಶ್ರೀ ರಾಹುಲ ಕೃಷ್ಣಪ್ಪ, ನಾವದಗೆ, ಜಯಶಂಕರ ಕಾಲೋನಿ, ಬಸವಕಲ್ಯಾಣ | ಸದಸ್ಯರು |
| 4 | ಶ್ರೀ ಸಜ್ಜನ ಚಾವುಸ ಶೇಖ ಅಹ್ಮದ ಚಾವುಸ, ತ್ರಿಪೂರಾಂತ ಬಸವಕಲ್ಯಾಣ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.31

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಚಿತ್ರಕಲಾ ಪರಿಷತ್ತಿನ ಚಿತ್ರಕಲಾ ಮಹಾವಿದ್ಯಾಲಯದ ಕಟ್ಟಡ ನಿರ್ಮಾಣದ "ಬಿಲ್ಡಿಂಗ್ ಮಾನಿಟರ್ಿಂಗ್ ಕಮಿಟಿ" ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೋಸೋ 2007, ದಿನಾಂಕ 19–10–2007.
2. ಅಧ್ಯಕ್ಷರು, ಕರ್ನಾಟಕ ಚಿತ್ರಕಲಾ ಪರಿಷತ್ತು ಇವರ ಪತ್ರ ಸಂಖ್ಯೆ: ಚಮವಿ/06/ಅಡ್ಮಿನ್–2008/177, ದಿನಾಂಕ 11–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 19–10–2007ರ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಕೆಂಗೇರಿಯಲ್ಲಿ ಸ್ಥಾಪಿಸಲಾಗುವ ಚಿತ್ರಕಲಾ ಕಾಲೇಜಿನ ಕ್ಯಾಂಪಸ್ ನಿರ್ಮಾಣ ಕಾರ್ಯದ ಉಸ್ತುವಾರಿಯನ್ನು ನೋಡಿಕೊಳ್ಳಲು ಆಡಳಿತಾಧಿಕಾರಿ ಚೇರ್‌ಪರ್‌ಸನ್ ರವರ ಅಧ್ಯಕ್ಷತೆಯಲ್ಲಿ ಉಸ್ತುವಾರಿ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 11–9–2008ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ಚಿತ್ರಕಲಾ ಮಹಾವಿದ್ಯಾಲಯ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಬಿಲ್ಡಿಂಗ್ ಮಾನಿಟರ್ಿಂಗ್ ಕಮಿಟಿಯನ್ನು ಪುನರ್ ರಚಿಸಿ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ವಿನಂತಿಸಿರುತ್ತಾರೆ.

| | | |
|---|---|---|
| 1 | ಅಧ್ಯಕ್ಷರು | ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ ಬೆಂಗಳೂರು–1 |
| 2 | ಉಪಾಧ್ಯಕ್ಷರು–1 | ಅಧ್ಯಕ್ಷರು, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು |
| 3 | ಉಪಾಧ್ಯಕ್ಷರು–2 | ಶ್ರೀ ದಯಾನಂದ ಪೈ, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು ಟ್ರಸ್ಟ್ |
| 4 | ಸದಸ್ಯರು | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ |
| 5 | ಸದಸ್ಯರು | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ |
| 6 | ಸದಸ್ಯರು | ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ |
| 7 | ಸದಸ್ಯರು | ಶ್ರೀ ಹೆಚ್.ಕೆ. ಕೇಜರಿವಾಲ್, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು ಟ್ರಸ್ಟ್ |

| | | |
|---|---|---|
| 8 | ಸದಸ್ಯರು | ಪ್ರಾಂಶುಪಾಲರು, ಚಿತ್ರಕಲಾ ಮಹಾವಿದ್ಯಾಲಯ, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು |
| 9 | ಸದಸ್ಯರು | ಶ್ರೀ ಹರೀಶ್ ಜೆ. ಪದ್ಮನಾಭ, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು |
| 10 | ಸದಸ್ಯರು | ಪ್ರೊ. ಎಂ.ಜೆ. ಕಮಲಾಕ್ಷಿ, ಕರ್ನಾಟಕ ಚಿತ್ರಕಲಾ ಪರಿಷತ್ತು |

**ಸರ್ಕಾರದ ಆದೇಶ ಸಂಖ್ಯೆ: ಸಇ 103 ಸಸಂನೋ 2008, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಂಗಳೂರ ಚಿತ್ರಕಲಾ ಕಾಲೇಜಿನ ಕ್ಯಾಂಪಸ್ ನಿರ್ಮಾಣ ಕಾರ್ಯ ಸುಗಮವಾಗಿ ನಡೆಸುವ ಉದ್ದೇಶದಿಂದ ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಬಿಲ್ಡಿಂಗ್ ಮಾನಿಟರ್ಿಂಗ್ ಕಮಿಟಿಯನ್ನು ಪುನರ್ ರಚಿಸಿ ಪ್ರಸ್ತಾವನೆಯಲ್ಲಿ ನಮೂದಿಸಿರುವ ಷರತ್ತಿಗೊಳಪಟ್ಟು ಆದೇಶಿಸಿದೆ.

| | | |
|---|---|---|
| 1 | ಅಧ್ಯಕ್ಷರು | ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ ಬೆಂಗಳೂರು-1 |
| 2 | ಉಪಾಧ್ಯಕ್ಷರು-1 | ಅಧ್ಯಕ್ಷರು, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು |
| 3 | ಉಪಾಧ್ಯಕ್ಷರು-2 | ಶ್ರೀ ದಯಾನಂದ ಪೈ, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು ಟ್ರಸ್ಟ್ |
| 4 | ಸದಸ್ಯರು | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ |
| 5 | ಸದಸ್ಯರು | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ |
| 6 | ಸದಸ್ಯರು | ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ |
| 7 | ಸದಸ್ಯರು | ಶ್ರೀ ಹೆಚ್.ಕೆ. ಕೇಜರಿವಾಲ್, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು ಟ್ರಸ್ಟ್ |
| 8 | ಸದಸ್ಯರು | ಪ್ರಾಂಶುಪಾಲರು, ಚಿತ್ರಕಲಾ ಮಹಾವಿದ್ಯಾಲಯ, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು |
| 9 | ಸದಸ್ಯರು | ಶ್ರೀ ಹರೀಶ್ ಜೆ. ಪದ್ಮನಾಭ, ಸದಸ್ಯರು, ಕರ್ನಾಟಕ ಚಿತ್ರಕಲಾ ಪರಿಷತ್ತು |
| 10 | ಸದಸ್ಯರು | ಪ್ರೊ. ಎಂ.ಜೆ. ಕಮಲಾಕ್ಷಿ, ಕರ್ನಾಟಕ ಚಿತ್ರಕಲಾ ಪರಿಷತ್ತು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.24

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಇ-ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳನ್ನು ಅನುಮೋದನೆಗಾಗಿ ಸಮಿತಿಯನ್ನು ಮರು-ರಚಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ 7-1-2005ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ವಿಮಾಆ 2004.

2. ದಿನಾಂಕ 17-10-2005ರ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 39 ವಿಮಾಆ 2004.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಇಲಾಖಾಗಳ ಇ-ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳನ್ನು ಅನುಮೋದಿಸಲು ಸರ್ಕಾರದ ಕಾರ್ಯದರ್ಶಿ, ಇ-ಆಡಳಿತ ಇವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಗಿತ್ತು. ಇ-ಆಡಳಿತ ಇಲಾಖೆಗೆ ಪ್ರಧಾನ ಕಾರ್ಯದರ್ಶಿಗಳು ಮುಖ್ಯಸ್ಥರಾಗಿರುವುದರಿಂದ ಹಾಗೂ ಸದರಿ ಸಮಿತಿಗೆ ಮುಖ್ಯ ಕಾರ್ಯ ನಿರ್ವಾಯಕಾಧಿಕಾರಿ, ಇ-ಆಡಳಿತ ಕೇಂದ್ರ ಇವರನ್ನು ಸದಸ್ಯರನ್ನಾಗಿ ಸೇರಿಸಬೇಕಾಗಿರುವುದರಿಂದ, ಸದರಿ ಸರ್ಕಾರದ ಆದೇಶವನ್ನು ಸೂಕ್ತವಾಗಿ ಮಾರ್ಪಡಿಸಿ, ಸಮಿತಿಯನ್ನು ಮರುರಚನೆ ಮಾಡಬೇಕಾಗಿರುತ್ತದೆ.

ಅಂತೆಯೇ, ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 37 ವಿಮಾಆ 2008, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2008.**

ಇಲಾಖೆಗಳ ಇ-ಆಡಳಿತ ವಾರ್ಷಿಕ ಕ್ರಿಯಾಯೋಜನೆಗಳನ್ನು ಅನುಮೋದಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇ-ಆಡಳಿತ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ಕೆಳಕಂಡಂತೆ ಮರು-ರಚನೆ ಮಾಡಲಾಗಿದೆ.

| | | |
|---|---|---|
| 1 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇ–ಆಡಳಿತ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು) | ಅಧ್ಯಕ್ಷರು |
| 2 | ಯೋಜನಾ ಇಲಾಖೆಯ ಪ್ರತಿನಿಧಿ | ಸದಸ್ಯರು |
| 3 | ಆರ್ಥಿಕ ಇಲಾಖೆಯ ಪ್ರತಿನಿಧಿ | ಸದಸ್ಯರು |
| 4 | ಪ್ರೊ. ವಿ. ರಾಜರಾಮನ್,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| 5 | ಶ್ರೀ ಆರ್. ಕೃಷ್ಣಮೂರ್ತಿ,<br>ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು | ಸದಸ್ಯರು |
| 6 | ರಾಜ್ಯ ಮಾಹಿತಿ ಅಧಿಕಾರಿ, ಎನ್.ಐ.ಸಿ. | ಸದಸ್ಯರು |
| 7 | ಮುಖ್ಯ ಕಾರ್ಯನಿರ್ವಾಧಿಕಾರಿ, ಇ–ಆಡಳಿತ ಕೇಂದ್ರ | ಸದಸ್ಯರು |
| 8 | ಸಂಬಂಧಿಸಿದ ಆಡಳಿತ ಇಲಾಖೆಯ ಪ್ರತಿನಿಧಿ | ಸದಸ್ಯರು |
| 9 | ಇಲಾಖೆಯ ಪ್ರತಿನಿಧಿ | ಸದಸ್ಯರು |
| 10 | ಉಪ ಕಾರ್ಯದರ್ಶಿ, ಇ–ಆಡಳಿತ | ಸದಸ್ಯ–ಕಾರ್ಯದರ್ಶಿ |

2. ಸಮಿತಿಯು, ಇಲಾಖೆಗಳ ವಾರ್ಷಿಕ ಇ–ಆಡಳಿತ ಕ್ರಿಯಾ ಯೋಜನೆಗಳನ್ನು ಪರಿಶೀಲಿಸಿ ಅನುಮೋದನೆಯನ್ನು ನೀಡಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.12

**ಗಂಗಾಧರ ನಿಂ. ದಾಟನಾಳ**

ಪೀಠಾಧಿಕಾರಿ, ಇ–ಆಡಳಿತ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ ಸಾಲ – ಅಸಲು ಮತ್ತು ಬಡ್ಡಿಯ ಮರುಪಾವತಿಗಾಗಿ 2008ರ ಡಿಸೆಂಬರ್ ಅಂತ್ಯದ 16ನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ; ಮಾತಂಇ 22 ಪಿಆರ್ಎಂ 2002, ದಿನಾಂಕ 6–3–03.
2. ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್‌ರವರ ಪತ್ರ ಸಂ: KBITS/ACT/97/2002-03, ದಿನಾಂಕ 3–12–2008.
3. ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ: ಮಾತಂನಿ/ಲೆಕ್ಕ–1/58/ಹುಡ್ಕೋ ಲೋನ್/ಡೆಬಿಟ್ಸ್ ಸರ್ವಿಸಸ್/636/2008–09, ದಿ: 4–12–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6–3–2003ರಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದ ಜೈವಿಕ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ಹುಡ್ಕೋ (Housing and Urban Development Corporation) ಸಂಸ್ಥೆಯಿಂದ ರೂ. 20.00 ಕೋಟಿ ಸಾಲವನ್ನು ಎತ್ತುವಳಿ ಮಾಡಲು ಮಂಜೂರಾತಿ ನೀಡಲಾಗಿತ್ತು.

2005ನೇ ವರ್ಷದಿಂದ ಹುಡ್ಕೋ ಸಂಸ್ಥೆಯ ಅಸಲು, ಬಡ್ಡಿಯ ಮರುಪಾವತಿಯ ಬಾಬ್ತು ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ತ್ರೈಮಾಸಿಕ ಅನುದಾನಗಳನ್ನು ಸರ್ಕಾರವು ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

2008–09ನೇ ಸಾಲಿನ ಆಯವ್ಯಯದಲ್ಲಿ ಸದರಿ ಸಾಲವನ್ನು ಮರುಪಾವತಿಸಲು ಲೆಕ್ಕಶೀರ್ಷಿಕೆ '5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ' ಇದರ ಅಡಿಯಲ್ಲಿ ರೂ. 1137.14 ಲಕ್ಷ ಒದಗಿಸಲಾಗಿದ್ದು, ಇದರಲ್ಲಿ ಇಲ್ಲಿಯವರೆಗೆ ರೂ. 183,16,046/– ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಪತ್ರ ಮತ್ತು (2)ರಲ್ಲಿ ಓದಲಾದ ಕೆಬಿಟ್ಸ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕರ ಪತ್ರದಲ್ಲಿ ಹುಡ್ಕೋ ಸಂಸ್ಥೆಗೆ 16ನೇ ಕಂತಿನ ಬಾಬ್ತು ಅಸಲು ರೂ. 62,50,000/– + ಬಡ್ಡಿ ಬಾಬ್ತು ರೂ. 26,05,360/– + ಸುಸ್ತಿ ಬಡ್ಡಿ ಬಾಬ್ತು ರೂ. 733/–ನ್ನು ಅಂದರೆ ಒಟ್ಟು ರೂ. 88,56,093/–ಗಳನ್ನು 2008ರ ಡಿಸೆಂಬರ್ ಅಂತ್ಯದೊಳಗಾಗಿ ಪಾವತಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತ, ಸದರಿ ಮೊತ್ತವನ್ನು ಬಿಡುಗಡೆ ಮಾಡಲು ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 03 ಪಿಆರ್‌ಎಂ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಡ್ಕೋ ಸಾಲದ ಬಾಬ್ತು ಹುಡ್ಕೋ ಸಂಸ್ಥೆಗೆ ಅಸಲು, ಬಡ್ಡಿ ಮತ್ತು ಸುಸ್ತಿ ಬಡ್ಡಿಯ ಬಾಬ್ತು ಪಾವತಿಸಲು ದಿನಾಂಕ 31–12–2008ರ ಅಂತ್ಯದ 16ನೇ ತ್ರೈಮಾಸಿಕ ಕಂತಿನ ಹಣ ರೂ. 88,56,093/–ಗಳ (ಎಂಬತ್ತೆಂಟು ಲಕ್ಷದ ಐವತ್ತಾರು ಸಾವಿರದ ತೊಂಬತ್ಮೂರು ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ '5465–01–190–1–08 (ಯೋಜನೇತರ) ಮಾಹಿತಿ ಬಾಂಡುಗಳು 240 ಸಾಲ ಮೇಲುಸ್ತುವಾರಿ' ಇದರ ಅಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಸದರಿ ಅನುದಾನದ ಬಳಕೆಯ ಬಗ್ಗೆ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008 ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಉಪಾಧ್ಯಕ್ಷರ ಆಪ್ತ ಶಾಖೆ ಹಾಗೂ ಸಮಿತಿಯ ಶಾಖೆಗೆ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ದಿನಾಂಕ 5–8–2008.
2. ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇವರ ಪತ್ರ ಸಂಖ್ಯೆ: ಅಭಾಸಕ/ಉ/317/08, ದಿನಾಂಕ 28–10–2008.

**ಪ್ರಸ್ತಾವನೆ :**

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯ ಮಂತ್ರಿಯವರು, ಘೋಷಿಸಿದಂತೆ "ಅನಿವಾಸಿ ಭಾರತೀಯರ ಸಮಿತಿ" ಕರ್ನಾಟಕ ಇದನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಉಪಾಧ್ಯಕ್ಷರು ಅನಿವಾಸಿ ಭಾರತೀಯರ ಸಮಿತಿ, ಕರ್ನಾಟಕ, ಬೆಂಗಳೂರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸದರಿ ಸಮಿತಿಯು ಸಮರ್ಪಕವಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ ಉಪಾಧ್ಯಕ್ಷರ ಆಪ್ತ ಶಾಖೆಗೆ ಹಾಗೂ ಸಮಿತಿಯ ಶಾಖೆಗೆ ಅಗತ್ಯ ಸಿಬ್ಬಂದಿ ಸೃಜಿಸಲು ಹಾಗೂ ಅಗತ್ಯ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದರ ಕಾರ್ಯನಿರ್ವಹಣೆಗೆ ಅಗತ್ಯ ಹುದ್ದೆಗಳನ್ನು ಸೃಜಿಸಲು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಇದರ ಉಪಾಧ್ಯಕ್ಷರ ಆಪ್ತ ಶಾಖೆ ಹಾಗೂ ಸಮಿತಿಯ ಕಛೇರಿಗೆ ಈ ಕೆಳಕಂಡ ಹುದ್ದೆಗಳನ್ನು 2 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

| | |
|---|---|
| **ಆಪ್ತ ಶಾಖೆಗೆ:** | |
| ಆಪ್ತ ಕಾರ್ಯದರ್ಶಿ | 01 ಹುದ್ದೆ |
| ಗ್ರೂಪ್–ಸಿ | 02 ಹುದ್ದೆಗಳು |
| ಗ್ರೂಪ್–ಡಿ | 02 ಹುದ್ದೆಗಳು |
| ವಾಹನ ಚಾಲಕ | 01 ಹುದ್ದೆ |
| **ಸಮಿತಿಯ ಶಾಖೆಗೆ:** | |
| ಸದಸ್ಯ ಕಾರ್ಯದರ್ಶಿ | 01 ಹುದ್ದೆ |
| ಅಧೀನ ಕಾರ್ಯದರ್ಶಿ | 01 ಹುದ್ದೆ |
| ಡಾಟಾ ಎಂಟ್ರಿ ಆಪರೇಟರ್ | 01 ಹುದ್ದೆ |
| ಸಹಾಯಕ/ಹಿರಿಯ ಸಹಾಯಕ | 01 ಹುದ್ದೆ |
| ಕಿರಿಯ ಸಹಾಯಕ | 01 ಹುದ್ದೆ |
| ವಾಹನ ಚಾಲಕ | 01 ಹುದ್ದೆ |
| ಗ್ರೂಪ್–ಡಿ | 01 ಹುದ್ದೆ |
| | **07 ಹುದ್ದೆಗಳು** |

2. ಈ ಹುದ್ದೆಗಳನ್ನು deputation/out source ಮೂಲ ತುಂಬತಕ್ಕದ್ದು.

3. ಈ ಸಮಿತಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಡಿ ಲೆಕ್ಕ ಶೀರ್ಷಿಕೆ "2205–00–800–0–09–059 (ಇತರೆ ಖರ್ಚು) (ಯೋಜನೆ) "ಅನಿವಾಸಿ ಕನ್ನಡಿಗರಿಗೆ ಕೇಂದ್ರ" ಇದರಡಿ ಕಲ್ಪಿಸಿರುವ 100.00 ಲಕ್ಷಗಳ ಅನುದಾನವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಬಿಡುಗಡೆ ಮಾಡಲು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2141 ವೆಚ್ಚ–5, 2008, ದಿನಾಂಕ 7–1–2008ರಲ್ಲಿ ನೀಡಿರುವ ಸಹಮತಿರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.7

**ಎಸ್. ತಿಪ್ಪೇಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಜಲಸಂಪನ್ಮೂಲ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಸನೀಇ 07 ದಾಮಪ್ರ 2007, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008.**

ದಿನಾಂಕ 25–10–2008ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂ: ಸನೀಇ 07 ದಾಮಪ್ರ 2007ರ ಆದೇಶ ಭಾಗದಲ್ಲಿ ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '4702–00–1–02–139 ಹೊಸಕಾಮಗಾರಿಗಳು (ಯೋಜನೆ)' ಎಂಬುದರ ಬದಲು 'ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '4702–00–101–1–02–139 (ಯೋಜನೆ)' ನೀರಾವರಿ ಕೆರೆಗಳು ಪಿಕಪ್‌ಗಳ ನಿರ್ಮಾಣ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.180

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕರ್ನಾಟಕ ಸರ್ಕಾರದ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಡಿಪಿಎಆರ್ 517 ಎಸ್ಎಎಸ್ 2008, ಬೆಂಗಳೂರು ದಿನಾಂಕ 19ನೇ ನವೆಂಬರ್ 2008**

**ವಿಷಯ :** ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡುವ ಬಗ್ಗೆ.

ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡುವ ಬಗ್ಗೆ ಈ ಹಿಂದೆ ಹೊರಡಿಸಲಾದ ಎಲ್ಲಾ ಮಾರ್ಗಸೂಚನೆಗಳನ್ನು ರದ್ದುಪಡಿಸುತ್ತಾ ಈ ಕೆಳಕಂಡಂತೆ ಮಾರ್ಗಸೂಚನೆಗಳನ್ನು ನೀಡಲಾಗಿದೆ:

ಇನ್ನು ಮುಂದೆ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಸಾಂದರ್ಭಿಕ ರಜೆ ಮಂಜೂರು ಮಾಡುವ ಕೋರಿಕೆಯನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಸಲ್ಲಿಸಬೇಕಾದ ಅಗತ್ಯವಿಲ್ಲ. ಈ ಬಗ್ಗೆ ಕೆಳಕಂಡಂತೆ ಅಧಿಕಾರ ಪ್ರತ್ಯಾಯೋಜನೆ ಮಾಡಲಾಗಿದೆ.

1) ಅಧಿಕಾರ ವ್ಯಾಪ್ತಿಯುಳ್ಳ ಪ್ರಾದೇಶಿಕ ಆಯುಕ್ತರು, ಅವರ ವ್ಯಾಪ್ತಿಯಲ್ಲಿ ಬರುವ ಜಿಲ್ಲಾಧಿಕಾರಿಗಳಿಗೆ ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ, ರಜೆಗೆ ಮುನ್ನ/ನಂತರ ಬರುವ ಸಾರ್ವತ್ರಿಕ ರಜೆ ದಿನಗಳನ್ನೂ ಸೇರಿದಂತೆ 3 ದಿನಗಳಿಗೆ ಮೀರದಂತೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಲು ಹಾಗೂ ಕೇಂದ್ರಸ್ಥಾನದಿಂದ ಹೊರಗೆ ಉಳಿಯಲು ಅನುಮತಿ ನೀಡಬಹುದಾಗಿದೆ.

2) ರಜೆಗೆ ಮುನ್ನ/ನಂತರ ಬರುವ ಸಾರ್ವತ್ರಿಕ ರಜೆ ದಿನಗಳನ್ನೂ ಸೇರಿದಂತೆ 4 ದಿನಗಳು ಮತ್ತು ಹೆಚ್ಚಿನ ಅವಧಿಗೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡಲು ಹಾಗೂ ಕಚೇರಿಯ ಕೇಂದ್ರಸ್ಥಾನದಿಂದ ಹೊರಗುಳಿಯಲು–

ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಇವರು ಜಿಲ್ಲಾಧಿಕಾರಿಗಳಿಗೆ ಮಂಜೂರಾತಿ ನೀಡಬಹುದು.

ಆ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಮಂಜೂರಾತಿ ನೀಡಬಹುದು.

ಇನ್ನು ಮುಂದೆ ಮೇಲಿನ ಅಧಿಕಾರ ಪ್ರತ್ಯಾಯೋಜನೆಯನ್ವಯ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಅಗತ್ಯಾನುಸಾರ ಮುಂಚಿತವಾಗಿ ರಜೆಯನ್ನು ಮಂಜೂರು ಮಾಡಿಸಿಕೊಂಡು ಕಚೇರಿ ಕೇಂದ್ರ ಸ್ಥಾನದಿಂದ ಹೊರಗುಳಿಯತಕ್ಕದ್ದು. ಈ ಮಾರ್ಗಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಇಲ್ಲವಾದಲ್ಲಿ, ಸಂಬಂಧಿಸಿದ ಅಧಿಕಾರಿಗಳು ನಿಯಮಾನುಸಾರ ಶಿಸ್ತು ಕ್ರಮಕ್ಕೆ ಗುರಿಯಾಗುವರು ಎಂಬುದನ್ನು ಮನವರಿಕೆ ಮಾಡಿಕೊಡಲಾಗಿದೆ.

**ಸುಧಾಕರ್ ರಾವ್**

ಪಿ.ಆರ್.3 ಸರ್ಕಾರದ ಮುಖ್ಯ ಕಾರ್ಯದರ್ಶಿ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀಮತಿ ಎನ್.ಕೆ. ಆಶಾ, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(8)/ಪಪೂಅ/198/2006–07, ದಿನಾಂಕ 23–12–2006.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ1(8)/ಪಪೂಅ/198/2006–07, ದಿನಾಂಕ 5–11–2008.

**ಪ್ರಸ್ತಾವನೆ :**

ಶ್ರೀಮತಿ ಎನ್.ಕೆ. ಆಶಾ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕೆಂಗೇರಿ ಇವರು ದಿನಾಂಕ 3–6–2004ರಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಪರೀಕ್ಷಾ ಪೂರ್ವ ಅವಧಿಯನ್ನು ದಿನಾಂಕ 2–6–2006 ರಂದು ಘೋಷಿಸಬೇಕಾಗಿತ್ತು. ಆದರೆ ಸದರಿಯವರು ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ವಿಳಂಬವಾಗಿ ಪಾಸು ಮಾಡಿಕೊಂಡಿರುವುದರಿಂದ ಇವರ ಪರೀಕ್ಷಾ ಪೂರ್ವ ಅವಧಿಯನ್ನು ದಿನಾಂಕ 3–6–2006 ರಿಂದ 2–8–2007 ರವರೆಗೆ ವಿಸ್ತರಿಸಬೇಕಾಗಿರುತ್ತದೆ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(ii) ರನ್ವಯ ಇರುವ ಅಧಿಕಾರ ವ್ಯಾಪ್ತಿಯಂತೆ ನೌಕರರ

ಪರಿವೀಕ್ಷಣಾ ಅವಧಿಯನ್ನು ದಿನಾಂಕ 3–6–2006 ರಿಂದ 2–6–2007 ರವರೆಗೆ ವಿಸ್ತರಿಸಿ, ಉಳಿದ ಅವಧಿಗೆ ಅಂದರೆ ದಿನಾಂಕ 3–6–2007 ರಿಂದ 2–8–2007 ರವರೆಗೆ ಸದರಿ ನಿಯಮಗಳ ನಿಯಮ 4(1)(i) ರಂತೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 173 ರೇಇವಿ 2008, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಎನ್.ಕೆ. ಆಶಾ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕೆಂಗೇರಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 3–6–2007 ರಿಂದ 2–8–2007 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(i) ರನ್ವಯ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 27

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕೃಷಿ ಸಚಿವಾಲಯ

**ವಿಷಯ :** ಶ್ರೀಮತಿ ರೂಪಾ ಎಸ್. ಪಾಟೀಲ್, ಇವರು ಕೃಷಿ ಅಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:**
1. ಕೃಷಿ ಆಯುಕ್ತರ ಪತ್ರ ಸಂ: ಕೃಷಿಪ–5/ರಾಜೀನಾಮೆ/67/2008–09, ದಿನಾಂಕ 18–11–2008.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 91 ಕೃಪಸೇ 2006, ದಿನಾಂಕ 30–8–2008 ಮತ್ತು ತಿದ್ದುಪಡಿ ಆದೇಶದ ದಿನಾಂಕ 15–9–2008.
3. ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ, ಇವರ ಆದೇಶ ಸಂಖ್ಯೆ: R/Rectt/Appt. 111(4)/2008, ದಿ: 10–11–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಕ್ರ.ಸಂ. (2)ರಲ್ಲಿ ಓದಲಾದ ಅಧಿಸೂಚನೆಯನ್ವಯ ಕೃಷಿ ಅಧಿಕಾರಿ ಹುದ್ದೆಗೆ ನೇರ ನೇಮಕಾತಿಗೊಂಡು ದಿನಾಂಕ 30–9–2008ರ ಅಪರಾಹ್ನದಿಂದ ಸಹಾಯಕ ಕೃಷಿ ನಿರ್ದೇಶಕರ ಕಚೇರಿ, ರಾಜ್ಯ ಮಣ್ಣು ಸಮೀಕ್ಷೆ, ಧಾರವಾಡ ಇಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸದರಿಯವರು ಕ್ರ.ಸಂ. (3)ರಲ್ಲಿ ಓದಲಾದ ಆದೇಶದಲ್ಲಿ ಧಾರವಾಡ ಕೃಷಿ ವಿಶ್ವ ವಿದ್ಯಾಲಯದಲ್ಲಿ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೇಮಕಗೊಂಡಿದ್ದು, ಸದರಿ ಹುದ್ದೆಗೆ ದಿನಾಂಕ 10–12–2008ರ ಒಳಗಾಗಿ ಹಾಜರಾಗಬೇಕಾಗಿರುವುದರಿಂದ ದಿನಾಂಕ: 29–11–2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ತಮ್ಮ ರಾಜೀನಾಮೆಯನ್ನು ಅಂಗೀಕರಿಸಲು ಕೋರಿ ಸಲ್ಲಿಸಿರುವ ಅಧಿಕಾರಿಯ ದಿನಾಂಕ 12–11–2008ರ ರಾಜೀನಾಮೆ ಪತ್ರವನ್ನು ಬಾಕಿ ಪ್ರಮಾಣ ಪತ್ರದೊಂದಿಗೆ ಕಳುಹಿಸುವುದರ ಜೊತೆಗೆ ಈ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಇರುವುದಿಲ್ಲವೆಂದು ಸಹ ತಿಳಿಸಿ ಪ್ರಸ್ತಾವನೆಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 292 ಕೃಪಸೇ 2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ರೂಪಾ ಎಸ್. ಪಾಟೀಲ್, ಕೃಷಿ ಅಧಿಕಾರಿ, ಸಹಾಯಕ ಕೃಷಿ ನಿರ್ದೇಶಕರ ಕಚೇರಿ, ರಾಜ್ಯ ಮಣ್ಣು ಸಮೀಕ್ಷೆ, ಧಾರವಾಡ ಇವರು ತಮ್ಮ ಹುದ್ದೆಗೆ ಸಲ್ಲಿಸಿದ ರಾಜೀನಾಮೆಯನ್ನು ದಿನಾಂಕ 29–11–2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 28

**ಮಂಜುನಾಥ್ ಪಾಟೀಲ್**

ಪೀಠಾಧಿಕಾರಿ–2, ಕೃಷಿ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ಅಮಾನತ್ ಕೋ-ಆಪರೇಟಿವ್ ಬ್ಯಾಂಕ್ ನಿ., ಬೆಂಗಳೂರು ಇದರ ಆಡಳಿತಗಾರರ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರ ಆದೇಶ ಸಂಖ್ಯೆ: ಸಿಒ 109 ಸಿಎಲ್ಎಂ 2008, ದಿನಾಂಕ 27-6-2008.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಯುಬಿಸಿ-5:ಮನವಿ:58: 2006-07, ದಿನಾಂಕ 20-10-2008.

**ಪ್ರಸ್ತಾವನೆ :**

ಭಾರತೀಯ ರಿಸರ್ವ್ ಬ್ಯಾಂಕಿನ ಪರಿವೀಕ್ಷಣಾ ವರದಿಯಲ್ಲಿ ಕಂಡು ಬಂದ ಗುರುತರ ಲೋಪದೋಷಗಳನ್ನು ಆಧರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಸಹಕಾರ ಸಂಘಗಳ ನಿಬಂಧಕರು ಸದರಿ ಬ್ಯಾಂಕಿನ ಆಡಳಿತ ಸಮಿತಿಯನ್ನು ರದ್ದುಗೊಳಿಸಿ ದಿನಾಂಕ 12-12-2007ರಂದು ಆಡಳಿತಗಾರರನ್ನು ನೇಮಿಸಿದ್ದಾರೆ. ತದನಂತರ ಆಡಳಿತಗಾರರ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿದ್ದು ಓದಲಾದ 1ರ ಆದೇಶದಲ್ಲಿ 3-12-2008ರವರೆವಿಗೂ ವಿಸ್ತರಿಸಿದ್ದು ಈ ಅವಧಿಯು ಮುಕ್ತಾಯವಾಗುತ್ತಿರುವ ಹಿನ್ನೆಲೆಯಲ್ಲಿ ಬ್ಯಾಂಕಿನ ಅಭಿವೃದ್ಧಿಯ ಹಿತದೃಷ್ಟಿಯಿಂದ ಆಡಳಿತಗಾರರ ಅವಧಿಯನ್ನು ದಿನಾಂಕ 3-12-2008 ರಿಂದ 31-3-2010 ಮಾರ್ಚ್ 2010ರ ತನಕ ವಿಸ್ತರಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 204 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಅಮಾನತ್ ಕೋ-ಆಪರೇಟಿವ್ ಬ್ಯಾಂಕ್ ನಿ., ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ 3-12-2008 ರಿಂದ 31-3-2010ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಮಾನತ್ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಮೂವತ್ತನಾಲ್ಕು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 2) ಪ್ರಕರಣ 30 ಉಪ-ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31-3-2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ-ಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.33

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ENERGY SECRETARIAT**

**CORRIGENDUM**

**No. EN 53 EEB 2008, Bangalore Dated 15th December 2008**

In Government Order No. EN 53 EEB 2008 dated 29-11-2008, in the Order portion at Sl.No. 7, the name appearing as "R. Anbalgan" shall be read as "R. Anbalagan".

By order and in the name of the Governor of Karnataka,

PR. 179

**S.J. SAMPATH KUMAR**
Under Secretary to Government,
Energy Department.